॥ ಶ್ರೀರಸ್ತು ॥

ಶ್ರೀಮದಖಿಲಸಂಪದಧಿಷ್ಠಾನ ನಿಖಿಲ ಧರಾಮಣ್ಡಲ
ಲಲಾಮಾಯಮಾನ ಕರ್ಣಾಟಜನಪದಾಧಿರಾಜ
ಶ್ರೀಮತ್ಕೃಷ್ಣರಾಜಪ್ರಭುವರಕುಲಕ್ರಮಪರಿಪಾಲ್ಯಮಾನ
ಮಹೀಶೂರ ರಾಜಧಾನೀವಿರಾಜಮಾನ

# ಶ್ರೀಮದಖಿಲ ವೈಷ್ಣವ ಮಹಾಜನಸಭೆಯಲ್ಲಿ

ಆಸ್ಥಾನ ವಿದ್ವಾಂಸರಾದ
ಕಚ್ಛಭುಜಂ ಶ್ರೀ॥ ಉ॥ ಶ್ರೀನಿವಾಸಾಚಾರ್ಯರು
ಮಂಡಯಂ ಶ್ರೀ ॥ ಉ ॥ ಆನಂದಾಳ್ವಾರು
ಇವರುಗಳಿಂದ

# "ಭಗವಚ್ಛಾಸ್ತ್ರಭಾಸ್ಕರ"

ಎಂಬ ಗ್ರಂಥವು
ಸನ್ ೧೮೯೫ನೇ ಇಸವಿ ನವಂಬರ್ ೧ನೇ ತಾರೀಖಿನಲ್ಲಿ
ಉಪನ್ಯಸಿಸಲ್ಪಟ್ಟು ಪ್ರಚಾರಮಾಡಲ್ಪಟ್ಟಿತು.

ಮೈಸೂರು
ಟ್ರೇಡಿಂಗ್ ಅಸೋಸಿಯೇಷನ್
೧೮೯೫

॥ ಶ್ರೀಃ ॥

ಈ ಪುಸ್ತಕವು

ಮೈಸೂರು ಭಾಗವತ ಸುಬ್ಬರಾಯರವರ ದೇವಸ್ಥಾನದ ಅಗ್ರಹಾರದಲ್ಲಿರುವ ದೊಡ್ಡಬೆಲೆ ಶ್ರೀ॥ಉ॥ಶ್ರೀನಿವಾಸಾಚಾರ್ಯರಲ್ಲಿ ದೊರೆಯುವದು.

ಇದರ ಕ್ರಯ ೪ ಆಣೆ.

## ವಿಷಯಸೂಚಿಕೆ.


ಈ ಪುಸ್ತಕವನ್ನು ಬರಿಯುವದಕ್ಕೆ ಕಾರಣ .. .. ೧

ಸಂಪ್ರೋಕ್ಷಣೆ ಕೊಡದೆಂಬುವದಕ್ಕೆ ಹೇಳಿರುವ ಹೇತುಗಳು ... ೪

ಈ ಹೇತುಗಳನ್ನು ಸಂಗತಗಳೆಂದು ಒಪ್ಪಿದರೂ ಅವುಗಳಿಂದ ಸಂಪ್ರೋಕ್ಷಣೆ ಕೊಡದೆಂಬ ವಿಷಯವು ಸಿದ್ಧಿಸಲಾರದು .. ೫

ಈ ಹೇತುಗಳೆ ಅಸಂಗತಗಳು ೯—೧೧೩

ಅಖಂಡಾವೃತಸಭಾನಾಮಧೇಯವಿಚಾರ .. ೯

ಅಖಿಲವೈಷ್ಣವಸಭಾನಾಮಧೇಯ ವಿಚಾರ .. ೧೧

ಭಗವಚ್ಛಾಸ್ತ್ರನಾಮಧೇಯ ವಿಚಾರ .. ೧೪

ಉದಾಹೃತವಚನಗಳಲ್ಲಿ ಕೆಲವು ಕಲ್ಪಿತಗಳೆಂಬುವದಕ್ಕೆ ಪ್ರತ್ಯುತ್ತರ .. ೧೫

ಪಂಚರಾತ್ರವು ವೈದಿಕರಾದ ಬ್ರಾಹ್ಮಣರಿಗೆ ಮುಖ್ಯಪ್ರಮಾಣವೆಂಬ ವಿಷಯ .. ... ೧೭—೨೧, ೩೫—೬೦

ಪಂಚರಾತ್ರಸ್ಥಲದಲ್ಲಿ ಪಂಚರಾತ್ರೇತರವಾದ ಯಾವ ಕ್ರಮದಿಂದಲೂ ಪೂಜೆನಡಿಸಕೂಡದು ಎಂಬ ವಿಷಯವನ್ನು ಬೋಧಿಸುವ ನಾರದೀಯ ಸಂಹಿತಾವಚನದವಿಚಾರ ... ೨೧—೨೫

ತಂತ್ರಜಾತವಿರುದ್ಧವಿಚಾರ ... ೨೫—೩೬

ರಂಗನಾಥಸ್ವಾಮಿಯವರು ಪಂಚರಾತ್ರಕ್ರಮದಿಂದಲೇ ಗೌತಮರಿಂದ ಪೂಜಿಸಲ್ಪಟ್ಟಿರುವರು .. ೨೬—೩೪

ಪಂಚರಾತ್ರವು ವೈದಿಕರಿಗೆ ಪ್ರಮಾಣವೆಂಬುವ ವಿಷಯದಲ್ಲಿ ಪಾದ್ಮ ಪುರಾಣ ಶ್ರೀಭಾಗವತಬ್ರಹ್ಮಾಂಡಪುರಾಣ ವ. ವಚನಗಳು ೫—೪೬

ಅದೇವಿಷಯದಲ್ಲಿ ಸ್ಮಾರ್ತರಾದ ಶ್ರೀ ಸ್ವಾಮಿ ಧ. ೩೬-೩೯

ಅದೇವಿಷಯದಲ್ಲಿ ಮತ್ತು ಪಂಚರಾ

ತಪ್ತಭ್ರಾನ್ತಿನಿವಾರಣ ... ೧೨೫—೧೨೬
ಶ್ರೀಶತಾರಿವಿಷಯ .. ೧೨೭—೧೨೮
ವಿಷ್ಣುಲಾಂಛನವಿಷಯ ... ೧೨೯—೧೩೨
ಶ್ರೀಶಂಕರಾಚಾರ್ಯರು ಸ್ಥಾಪಿಸಿದರೆಂದು ಹೇಳಲ್ಪಡುವ ವೈಷ್ಣವ ಮತವು
ಶಂಖಚಕ್ರಧಾರಣಸಹಿತವಾದದ್ದೇ ಎಂಬುವ ವಿಷಯ ೧೩೩—೧೩೬
ಸನ್ಯಾಸಿಗಳಿಗೆ ಆಲಯಪೂಜೆಯಲ್ಲಧಿಕಾರವಿಲ್ಲವೆಂಬುವವಿಷಯ ೧೩೭—೧೪೦
ದೇಶಾಂತರದಲ್ಲಿನ ಆಲಯದವಿಚಾರ ... ೧೪೦—೧೪೧
ಶ್ರೀ ಶಂಕರಾಚಾರ್ಯರವರು ದಯಮಾಡಿಸಿದ್ದ
ಸ್ಥಳಗಳಲ್ಲಿ ದೇವರಿಗೆ ನಮಸ್ಕಾರ ಸ್ತೋತ್ರಗಳನ್ನು ಮಾ
ತ್ರ ಅವರು ನಡಸಿರುವರೇಹೊರ್ತು ಪೂಜೆಯನ್ನು ಎಲ್ಲಿಯೂ
ಮಾಡಲಿಲ್ಲ ಎಂಬುವವಿಷಯ ... ೧೪೨—೧೪೩
ಪ್ರಾಕಾರದಲ್ಲಿ ವಾಹನಾರೋಹಣ ನಿಷೇಧವಿಷಯ ೧೪೩—೧೪೫
ಅರ್ಚಕರು ತಪಸ್ವಿಗಳಾದರೆ ದೇವತಾಸಾನ್ನಿಧ್ಯ
ಉಂಟಾಗುವವಿಷಯ ... ೧೪೬—೧೪೭
ಉಕ್ತುಸಿ ಶೃಂಗೇರೀ ಮೇಲುಕೋಟೆ ದೇವರುಗಳವಿಷಯ ೧೪೭—೧೪೯
ನಿರೂಪವಿಷಯ ... ... ೧೫೦
ಶೃಂಗೇರಿಸ್ವಾಮಿಗಳು ಅಲ್ಲಲ್ಲಿ ಪೂಜೆನಡೆಸಿರು
ವರೆಂದು ಬರದಿರುವದಕ್ಕೆ ಪ್ರತ್ಯುತ್ತರ ೧೫೦—೧೫೧
ಇಂಥಾ ನಿಷಿದ್ಧಕರ್ಮ ನಡಸಿರುವ ಸ್ಥಲದಲ್ಲಿ ಸಂಪ್ರೋಕ್ಷಣೆ
ಇಲ್ಲದೇ ಪೂಜೆ ಮತ್ತು ತೀರ್ಥಾದಿಸ್ವೀಕಾರ ಕೂಡದೆಂ
ಬವಿಷಯ ೧೫೧—೧೫೪
ನಿಷಿದ್ಧಕಾರ್ಯದಿಂದ ದೇವತಾ ಸಾನ್ನಿಧ್ಯವು ತಪ್ಪಿಹೋಗುವವಿಷಯ ೧೫೫
ಉಪಸಂಹಾರ ೧೫೬

ಶ್ರಿಯೈನಮಃ

ಶ್ರೀಹಯವದನಾಯನಮಃ

ಅಸ್ಮದ್ಗುರುಭ್ಯೋನಮಃ

---

ಜಯತು ಜಯತು ಕೃಷ್ಣೋ ದೇವತಾಸಾರ್ವಭೌಮಃ ।
ಜಯತು ಜಯತು ತೇನಾವಿಷ್ಕೃತಸ್ತನ್ತ್ರರಾಜಃ ॥
ಜಯತು ಜಯತು ನಿಷ್ಪಂಸ್ತದ್ದ್ವಯೇ ದೇಶಿಕೇನ್ದ್ರಃ ।
ಜಯತು ಜಯತು ಭಕ್ತ್ಯಾ ತತ್ತ್ರಯೇ ಕೃಷ್ಣರಾಜಃ ॥
ನಾರದಕೃಪಾಪ್ತಸಾತ್ವತಸಾರೋಽಯಂ ಗೌತಮಸ್ಸಮಾನರ್ಚ್ಛ ।
ನೀರದ ಇವಾಭಿರಾಮೋ ಧೀರಂಗೇ ಭಾತು ಮೇ ಸ ರಂಗೇಶಃ ।

ಶ್ರೀಮದಖಿಲಸಮ್ಪದಧಿಷ್ಠಾನನಿಖಿಲವಸುನ್ಧರಾಮಣ್ಡಲಲಲಾಮಾಯಮಾನ ಕರ್ಣಾಟಜನಪದಾಧೀಶ್ವರ ಶ್ರೀಮದ್ರಾಜಾಧಿರಾಜರಾಜಪರಮೇಶ್ವರೇತ್ಯಾದ್ಯನನ್ಯಸಾಧಾರಣ ಬಿರುದಾವಲೀವಿರಾಜಮಾನ ನಿರವದ್ಯಾನಾದಿಶ್ರುತಿಸ್ಮೃತೀತಿಹಾಸಾದಿ ಸಮಧಿಗತ ಸಮ್ಪ್ರದಾಯವಿಷ್ಣುಪದೀ ಕಲುಷೀಕರಣ ಸರಭಸೋದ್ಯತಾಸಾಧುಕುಮ್ಭಿಕುಂಭವಿದಾರಣಕಣ್ಠೀರವ ಶ್ರೀಮಚ್ಚಾಮರಾಜೇನ್ದ್ರತನುಜ ಶ್ರೀಮತ್ಕೃಷ್ಣರಾಜಸಾರ್ವಭೌಮ ಪರಿಪಾಲ್ಯಮಾನ ಮಹೀಶೂರಾಭಿಧಾನರಾಜಧಾನಿಯೊಳ್ ಶ್ರೀರಂಗಪಟ್ಟಣದಲ್ಲಿ ಶ್ರೀರಂಗನಾಥ ದೇವರ ದೇವಸ್ಥಾನದಲ್ಲಿ ಅದೀಕ್ಷಿತರಾದ ಶ್ರೀಶೃಂಗೇರೀಸ್ವಾಮಿಗಳವರು ಗರ್ಭಗೃಹಪ್ರವೇಶಾದಿಗಳಂಮಾಡಿ ನಿತ್ಯನೈಮಿತ್ತಿಕಾದಿ ಪೂಜಾವೈಗುಣ್ಯವನ್ನುಂಟುಮಾಡಿದರೆಂಬ ವಿಷಯವನ್ನು ಕುರಿತು ವಿಶೇಷವಾಗಿ ಅನುತಾಪಪಟ್ಟು ಅಕಸ್ಮಾತ್ತಾಗಿ ಸಂಭವಿಸಿರುವ ಪೂಜಾವೈಗುಣ್ಯವನ್ನು ಮಾತ್ರ ಪರಿಹರಿಸಿಕೊಳ್ಳಬೇ

ಕೆಂಬ ಉದ್ದೇಶ್ಯದಿಂದ ಅಖಿಲವೈಷ್ಣವಮಹಾಜನಸಭೆಯವರು ಪಂಚರಾತ್ರ ರೀತಿಯನ್ನನುಸರಿಸಿದ ದೇವಾಲಯಗಳಲ್ಲಿ ಅದೀಕ್ಷಿತರ ಗರ್ಭಗೃಹಪ್ರವೇಶಾದಿಗಳಂ ನಿಷೇಧಿಸುವ ಭಗವಚ್ಛಾಸ್ತ್ರೀಯ ಅನೇಕವಚನಗಳನ್ನುದಾಹರಿಸಿ ಅದರಿಂದಬಂದಿರುವ ಪೂಜಾದಿ ವೈಗುಣ್ಯವನ್ನು ಪರಿಹರಿಸುವದಕ್ಕಾಗಿ ಶಾಸ್ತ್ರೋಕ್ತವಾದ ಸಂಪ್ರೋಕ್ಷಣೆ ಆಗಬೇಕೆಂಬ ವಿಷಯವನ್ನು ನಿರ್ಧರಿಸಿ ಆರೀತಿಯಾಗಿ ಸಂಪ್ರೋಕ್ಷಣೆಯಂ ಇವರೇ ಸ್ವತಂತ್ರವಾಗಿ ಇತರರಿಗೆ ತಿಳಿಸದೆ ನಡಿಸುವಬಕ್ಕೆ ಕೆಲವು ಅಧಿಕಾರಿ ಜನಗಳ ಪಾರತನ್ತ್ರ್ಯವನ್ನು ಹೊಂದಿರ್ಪ ಈ ದೇವಸ್ಥಾನದೊಳ್ ಅವಕಾಶವಿಲ್ಲದಿರುವಕಾರಣ ಮಹಾಮಾತೃಶ್ರೀ ವಾಣೀವಿಲಾಸಸನ್ನಿಧಾನದೊಳ್ ವಿಜ್ಞಾಪಿಸಿದರು ಈ ವಿಷಯವು ಕ್ರಮೇಣ ಸಕಲದೇಶಗಳಲ್ಲಿಯೂ ಪ್ರಚಾರಗೊಂಡು ಶ್ರೀ ಶೃಂಗೇರಿಸ್ವಾಮಿಗಳವರು ಮಾಡಿಪ ಗರ್ಭಗೃಹಪ್ರವೇಶಾದಿಗಳು ಅಶಾಸ್ತ್ರೀಯಗಳೆಂತಲೂ ಅದಕ್ಕಾಗಿ ಸಂಪ್ರೋಕ್ಷಣೆ ನಡಿಯುವದು ಯುಕ್ತವೆಂತಲೂ ಸರ್ವರೂ ಅಭಿಪ್ರಾಯಪಟ್ಟರು. ಅನಂತರ ಅಶಾಸ್ತ್ರೀಯವಾದ ಕಾರ್ಯವನ್ನು ತಾವು ಮಾಡಿದರೆ ಮಾನವೆಂತಲೂ ಶಾಸ್ತ್ರೀಯವಾದ ಕಾರ್ಯವನ್ನು ಇತರರು ಮಾಡಿದರೆ ತಮಗೆ ಅವಮಾನವೆಂತಲೂ ವಿಪರೀತವಾಗಿ ಗ್ರಹಿಸಿ ಅಖಿಲವೈಷ್ಣವಸಭೆಯವರ ಉದ್ದೇಶ್ಯಭಂಗಮಾಡುವುದೇ ತಮಗೆ ಮುಖ್ಯೋದ್ದೇಶ್ಯವೆಂದು ಭಾವಿಸಿ ಪ್ರಸಕ್ತವಿಷಯವನ್ನು ದ್ವೈತಾದ್ವೈತಕಲಹದಲ್ಲಿ ಪರ್ಯವಸಾನಮಾಡದೆ ಹೋದರೆ ತಮ್ಮ ಇಷ್ಟಸಿದ್ಧಿಯಾಗಲಾರದೆಂದೆಣಿಸಿ ಸ್ಮಾರ್ತರಲ್ಲಿ ಕೆಲವು ಜನರು ಗುಂಪುಸೇರಿ ಅಖಂಡಾದ್ವೈತಸಭೆಯೆಂದು ಹೆಸರಿಟ್ಟುಕೊಂಡು ಮತದೂಷಣೆಗಳೇಮೊದಲಾದ ಅಪ್ರಕೃತಗಳಾದ ಅನೇಕಾಂಶಗಳನ್ನು ವಿಶೇಷವಾಗಿ ಉಪನ್ಯಾಸಮಾಡಿ ಅಖಿಲವೈಷ್ಣವ ಸಭೆಯವರು ಮಾಡಿರುವ ಸಿದ್ಧಾಂತಕ್ಕೆ ವಿರುದ್ಧವಾಗಿ ಸಿದ್ಧಾಂತವನ್ನು ಮಾಡಿದಂತೆ ಒಂದು ಪುಸ್ತಕವನ್ನು ಪ್ರಸಿದ್ಧಪಡಿಸಿರುವರು. ಇದರಲ್ಲಿ ಇರುವ ಪ್ರಮಾಣನಿಂದೆ, ಮತನಿಂದೆ, ಆಚಾರ್ಯನಿಂದೆ, ಇವೇಮೊದಲಾದ

ಅನೇಕ ವಿಷಯಗಳನ್ನು ನೋಡಿದರೆ ಅತಿಶಾಂತರಾಗಿ ಇದ್ದವರಿಗೂ,

" ಯಥಾಶಕ್ತಿ ನಿಗೃಹ್ಣೀಯಾದ್ದೇವತಾಗುರುನಿನ್ದಕಾನ್ "

ಎಂಬ ವಚನಾರ್ಥವು ಮನಸ್ಸಿನಲ್ಲಿ ತೋರದೆ ಯಿರಲಾರದು. ಇದನ್ನು ಆಮೂಲಾಗ್ರವಾಗಿ ಪರಿಶೋಧಿಸುವವರಿಗೆ ಇದರಲ್ಲಿ ಅಪ್ರಕೃತವಾದ ದೂಷಣೆಗಳೇ ಅಧಿಕವಾಗಿರುವದೆಂತಲೂ ಪಂಚರಾತ್ರ ಶಾಸ್ತ್ರಾನುಸಾರ ನಡಿಯುತ್ತಲಿರುವ ದೇವಸ್ಥಾನದಲ್ಲಿ ಅದೀಕ್ಷಿತರು ಗರ್ಭಗೃಹಪ್ರವೇಶವೇ ಮೊದಲಾದವುಗಳನ್ನು ಮಾಡುವದು ನಿಷಿದ್ಧವೆಂದು ಅನೇಕ ಪ್ರಮಾಣವಚನಗಳನ್ನು ಉದಾಹರಿಸಿ ಅಖಿಲ ವೈಷ್ಣವಸಭೆಯವರು ಮಾಡಿದ ತೀರ್ಮಾನಕ್ಕೆ ಸರಿಯಾದ ಸಮಾಧಾನವೇನೂ ಇಲ್ಲವೆಂತಲೂ ಲೌಕಿಕೋಕ್ತಿಗಳೇ ವಿಶೇಷವಾಗಿರುವದೆಂತಲೂ ತಿಳಿಯದೆ ಇರಲಾರದು. ಆದರೂ ಇವರು ಬರೆದಿರುವದರಲ್ಲಿ ಯುಕ್ತಾಯುಕ್ತ ವಿಮರ್ಶೆಮಾಡಿ ಬರೆಯದೆ ಇದ್ದರೆ ಸಾಮಾನ್ಯ ಜನರು ವಿಪರೀತವಾಗಿ ಗ್ರಹಿಸುವರೆಂದು ಇದಕ್ಕೆ ಉತ್ತರವನ್ನು ಬರೆಯಲುಪಕ್ರಮಿಸಬೇಕಾಗಿಬಂತು ಇತರ ಮತ ದೂಷಣೆಯು ಸತ್ಪುರುಷರಿಗೆ ಅನಾವಶ್ಯಕವಾಗಿಯೂ ಮತ್ತು ಅನುಪಾದೇಯವಾಗಿಯೂ ಇರುವುದೆಂದು ನಿಶ್ಚಯಿಸಿ ಅಖಿಲವೈಷ್ಣವ ಸಭೆಯವರ ಪ್ರೊಸಿಡಿಂಗ್ಸಿನಲ್ಲಿ ಅಧಿಕೋಕ್ತಿ ಲೇಶವೂ ಇಲ್ಲದಂತೆ ಪ್ರಕೃತಾಂಶವು ಪ್ರಚಾರಗೊಳಿಸಲ್ಪಟ್ಟಿತು. ಆದರೆ ಪ್ರಕೃತದಲ್ಲಿ ಇವರು ಬರೆದಿರುವದಕ್ಕೆ ಪ್ರತ್ಯುತ್ತರವಾಗಿಯೂ ಅಪರಿಹಾರ್ಯವಾಗಿಯೂ ಕೆಲವಂಶಗಳು ಅವಶ್ಯ ಲೇಖನೀಯಗಳಾದುದರಿಂ ಬರೆಯಲ್ಪಟ್ಟವೆ ಯಲ್ಲದೆ ಬೇರೆವಿಧವಾದ ತಾತ್ಪರ್ಯವೇನೂ ನಮಗಿಲ್ಲವೆಂದು ಸರ್ವರಿಗೂ ವೇದ್ಯವಾಗದೆ ಇರಲಾರದು. ಆದರೆ ಶಾಸ್ತ್ರಜ್ಞರಾದ ಅಖಣ್ಡಾದ್ವೈತಸಭೆಯವರು ಈರೀತಿಯಾಗಿ ಇತರರ ನಿಂದೆಗೂ ಶಾಸ್ತ್ರಾರ್ಥಾಪಲಾಪಕ್ಕೂ ಪ್ರವರ್ತಿಸುವದು ಅನುಚಿತವು. ಆದರೆ ಕಾಲಸ್ವಭಾವವು ಎಂಥಾವರಿಗೂ ಮತಿಭೇದವನ್ನುಂಟುಮಾಡುವದೂ ಎಂಬುವದು ಪ್ರತ್ಯಕ್ಷಸಿದ್ಧವಾಗಿಯೇ ಇರು

ವದು. ಇದುಹ್ಯಾಗಾದರೂಇರಲಿ. ಪ್ರಕೃತದಲ್ಲಿ ಅಖಣ್ಡಾದ್ವೈತ ಸಭೆಯವರು ಬರೆದಿರುವ ಅಂಶಗಳನ್ನು ಪರ್ಯಾಲೋಚಿಸುವುದಕ್ಕೆ ಉಪಕ್ರಮಿಸೋಣ.—

ವೈಷ್ಣವ ಸಭೆಯವರು ೩೦—೬—೫೫ ರಲ್ಲಿ ಪಂಚರಾತ್ರವಚನ ಗಳನ್ನು ಉದಾಹರಿಸಿ ಸಂಪ್ರೋಕ್ಷಣೆ ಆಗಬೇಕೆಂದು ನಿರ್ಣಯಿಸಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಸಂಪ್ರೋಕ್ಷಣೆ ಮಾಡಬೇಕಾದಾವಶ್ಯಕವಿಲ್ಲವೆಂಬುವ ದಕ್ಕೆ ಇವರು ಹೇಳಿರುವ ಕಾರಣಗಳು—೪

೧ ಪಂಚರಾತ್ರಾಗಮವು ಬ್ರಾಹ್ಮಣರಿಗೆ ಮುಖ್ಯ ಪ್ರಮಾಣವಲ್ಲ ವೆಂಬುವದು—

೨ ಪಂಚರಾತ್ರಾಗಮವು ಬ್ರಾಹ್ಮಣರಿಗೆ ಪ್ರಮಾಣವೆಂದು ಒಪ್ಪಿ ದಾಗ್ಯೂ ಶ್ರೀರಂಗಪಟ್ಟಣದಲ್ಲಿ ಶ್ರೀ ರಂಗನಾಥದೇವರು ಗೌತಮರಿಂದ ಪಂಚ ರಾತ್ರಾಗಮರೀತಿಯಾಗಿ ಪ್ರತಿಷ್ಠಿತರಲ್ಲವೆಂಬುವದು—

೩. ಪಂಚರಾತ್ರರೀತ್ಯಾ ಪ್ರತಿಷ್ಠಿತರಾದಾಗ್ಯೂ ಸೂತಸಂಹಿತೆಯ ಲ್ಲಿರುವ ಒಂದು ವಚನಕ್ಕೂ ಪಂಚರಾತ್ರಾಗಮದಲ್ಲಿರುವ ವಚನಗಳಿಗೂ ಉತ್ಸರ್ಗಾಪವಾದನ್ಯಾಯದಿಂದಲೂ ಮತ್ತು ಅರ್ಥವಾದ ರೂಪತ್ವಸ್ವೀಕಾರ ದಿಂದಲೂ ಏಕಕಂಠ್ಯವನ್ನು ಕಲ್ಪಿಸುವದು—

೪. ವೈಷ್ಣವರು ಉದಾಹರಿಸಿರುವ ವಚನಗಳಲ್ಲಿ ಕೆಲವು ವಚನ ಗಳು ಅನನ್ವಿತಗಳಾಗಿರುವವಲ್ಲದೆ ಬಹಳ ವಚನಗಳು ಇವರ ಉದ್ದೇಶ್ಯಕ್ಕೆ ಸಾಧಕಗಳಲ್ಲದೆ ಬೇರೆ ಅರ್ಥವನ್ನು ಕೊಡತಕ್ಕವುಗಳಾಗಿರುತ್ತವೆ ಎಂಬುವದು.

ಈ ಕಾರಣಗಳು ಗಗನಕುಸುಮಗಳಂತೆ ಇದ್ದರೂ ವಾಸ್ತವಗಳೆಂದು ಒಪ್ಪಿದರೂ ಇವುಗಳಿಂದ ಸಂಪ್ರೋಕ್ಷಣೆ ಅವಶ್ಯವಿಲ್ಲವೆಂಬ ಇವರ ಇಷ್ಟವು ಸಿದ್ಧಿಸಲಾರದು. ಹ್ಯಾಗಂದರೆ

ಪಂಚರಾತ್ರಾಗಮವು ಇವರಂತೆ ಇರುವ ಬ್ರಾಹ್ಮಣರಿಗೆ ಮುಖ್ಯ ಪ್ರಮಾಣವಲ್ಲವೆಂಬಂಶವನ್ನು ಅಂಗೀಕರಿಸೋಣ, ಆದಾಗ್ಯೂ ಯಾರಿಗಾದರೂ ಕೆಲವರಿಗೆ ಮುಖ್ಯಪ್ರಮಾಣವೆಂದು ಇವರು ಹೇಳಬೇಕಲ್ಲವೆ ? ಯಾವ ಜನರಿಗೆ ಪಂಚರಾತ್ರವು ಪ್ರಮಾಣವೆಂದು ಹೇಳುವರೊ ಈಗ ಪಂಚರಾತ್ರಾಗಮಾನುಸಾರಿಗಳಾದ ವೈಷ್ಣವರು ಇವರ ಇಷ್ಟಾನುಸಾರ ಅಂಥಾವರೆ ಆಗಿರಲಿ, ಅದರಿಂದ ಏನೂ ವೈಷ್ಣವರಿಗೆ ಕೊರತೆಇಲ್ಲ ಲೋಕದಲ್ಲಿ ಕೆಲವು ಪ್ರಾಣಿಗಳಿಗೆ ಅವರದೃಷ್ಟ್ಯನುಸಾರವಾಗಿ ಸೂರ್ಯನು ಅನ್ಧಕಾರಾವೃತನಾಗಿ ತಿಳಿಯಬಂದ ಮಾತ್ರದಿಂದ ಸೂರ್ಯನಿಗೆ ಬಾಧಕವಿಲ್ಲವಷ್ಟೆ ಇವರಂಥಾ ಬ್ರಾಹ್ಮಣರಲ್ಲದ ಪಂಚರಾತ್ರಾಗಮಾನುಸಾರವಾಗಿರುವವರು ಅದರಲ್ಲಿ ಇರುವಂತೆ ನಡಿಯಬೇಕಾದದ್ದಾವಶ್ಯಕವಷ್ಟೆ ಹೀಗಿರುವಾಗ ಶ್ರೀ ಶೃಂಗೇರೀ ಸ್ವಾಮಿಗಳವರು ಗರ್ಭಗೃಹಪ್ರವೇಶವೇ ಮೊದಲಾದ ನಿಷಿದ್ಧಾಚರಣೆಗಳಂ ಮಾಡಿ ವೈಷ್ಣವರು ತಮ್ಮಾಗಮ ಶಾಸ್ತ್ರಾನುಸಾರ ಮಾಡುತ್ತಿರುವ ಪೂಜೆಗೆ ವೈಗುಣ್ಯವನ್ನುಂಟುಮಾಡಬಹುದೊ ? ಅವರವರ ಅಧಿಕಾರಾನುಗುಣವಾಗಿ ಆಚರಿಸುತ್ತಲಿರುವ ಧರ್ಮಕ್ಕೆ ಲೋಪಮಾಡುವುದು ಯುಕ್ತವೊ ? ಒಂದು ವೇಳೆ ಪ್ರಮಾದದಿಂದ ಮಾಡಿದರೂ ವೈಷ್ಣವರು ತಮ್ಮಪೂಜೆಗೆ ವೈಗುಣ್ಯ ಬಂದದ್ದಕ್ಕಾಗಿ ಸಂಪ್ರೋಕ್ಷಣೆ ಎಂಬ ನಿಷ್ಕೃತಿ ಮಾಡಿಕೊಳ್ಳುವದಕ್ಕೆ ಉದ್ಯುಕ್ತರಾದರೆ ಅದಕ್ಕೆಅತ್ಯಾರ್ಭಟದೊಡನೆ ನಿಷ್ಕಾಮರಾಗಿಯೂ ನಿರಭಿಮಾನಿಗಳಾಗಿಯೂ ಇರುವ ಅಖಂಡಾದ್ವೈತಸಭೆಯವರು ಅವರ ಪ್ರೇರಕರು ಸಹ ತಡೆಮಾಡಬುಪಕ್ರಮಿಸುವದು ಯುಕ್ತವೊ ? ಅದರಿಂದ ಅವರಿಗೆ ಶಾಸ್ತ್ರಬಾಧೆಯೇನಾದರೂ ಉಂಟೊ ? ಬ್ರಹ್ಮಚಾರಿಗೆ ಗುರುಕುಲವಾಸಾಧ್ಯಯನ ಭಿಕ್ಷಾಚರಣ ಮಧ್ವಶನನಿಷೇಧವೆ ಮೊದಲಾದನಿಯಮವನ್ನು ಬೋಧಿಸುವ ಶಾಸ್ತ್ರವು ಗೃಹಸ್ಥನಿಗೆ ಅನ್ವಯಿಸತಕ್ಕಪ್ರಮಾಣಗಳಲ್ಲದಮಾತ್ರಕ್ಕೆ ಗೃಹಸ್ಥನು ಆಬ್ರಹ್ಮಚಾರಿಯ ಧರ್ಮಕ್ಕೆ ವೈಗುಣ್ಯವನ್ನು

ಟುವಮಾಡುವದು ಯುಕ್ತವ್ರೊ ? ಒಂದು ವೇಳೆ ಪ್ರಮಾದದಿಂದಮಾಡಿದರೂ ಆಬ್ರಹ್ಮಚಾರಿಯು ನಿಷ್ಕೃತಿಯನ್ನು ಮಾಡಿಕೊಳ್ಳಲುಪಕ್ರಮಿಸಿದರೆ ಅದಕ್ಕೆ ಆಗೃಹಸ್ಥನು ತಡೆಮಾಡುವದು ಸಾಧುವ್ರೊ ? ಒಂದುವೇಳೆ ಹಾಗೆತಡೆ ಮಾಡಲುಪಕ್ರಮಿಸಿದ ಗೃಹಸ್ಥನನ್ನು ನಿರೂಪಕರಾದ ಜನರು ಯುಕ್ತವೆಂದು ಹೇಳುವರೊ ? ಇಂಥಾ ಹೇತುವಿನಿಂದ ಸಂಪ್ರೋಕ್ಷಣೆಮಾಡಲಾವಶ್ಯಕವಿಲ್ಲವೆಂಬದಾಗಿ ಸಾಧಿಸಬೇಕೆಂದು ತಿಳಿದುಕೊಂಡಿರುವವರ ಬುದ್ಧಿಕೌಶಲವನ್ನು, ಎಷ್ಟುಕೊಂಡಾಡಿದರೂ ತೀರದು

೨. ಪಂಚರಾತ್ರಾಗಮವು ಬ್ರಾಹ್ಮಣರಿಗೆ ಪ್ರಮಾಣವೆಂದು ಒಪ್ಪಿದರೂ ಶ್ರೀರಂಗಪಟ್ಟಣದಲ್ಲಿ ಶ್ರೀ ರಂಗನಾಥದೇವರು ಗೌತಮರು ಪ್ರತಿಷ್ಠೆ ಮಾಡಿದಕಾಲದಲ್ಲಿ ಪಂಚರಾತ್ರಾಗಮರೀತಿಯಾಗಿ ಪ್ರತಿಷ್ಠಿತರಲ್ಲವೆಂಬುವದು.

ಇದನ್ನು ಶಶವಿಷಾಣದಂತೆ ಒಪ್ಪಿಕೊಳ್ಳೋಣ ಇದರಿಂದ ಸಂಪ್ರೋಕ್ಷಣೆ ಅನಾವಶ್ಯಕವೆಂಬಂಶವು ಹ್ಯಾಗೆ ಸಿದ್ಧಿಸೀತು. ಪಂಚರಾತ್ರಾಗಮಾನುಸಾರಿ ವೈಷ್ಣವರು ಪೂಜೆಯಂ ಮಾಡಲು ೫ ಅಥವಾ ೬ ಶತಮಾನಗಳ ಕೆಳಗೆ ಉಪಕ್ರಮಿಸಿದರು ಎಂಬ ಇವರತಾತ್ಪರ್ಯವನ್ನು ಅಂಗೀಕರಿಸಿದಾಗ್ಯೂ ಈರೀತಿಯಾಗಿ ಪೂಜೆ ನಡಿಯತಕ್ಕಸ್ಥಲಗಳಲ್ಲಿ ಅದೀಕ್ಷಿತರು ಗರ್ಭಗೃಹಪ್ರವೇಶಾದಿಗಳನ್ನು ಮಾಡಿದಾಗ್ಯೂ ವೈಷ್ಣವಸಭೆಯವರು ೨೭ನೆ ಪುಟದಲ್ಲಿ ಉದಾಹರಿಸಿರುವ—

"ತತಸ್ತು ಬಿಮ್ಬಸ್ಯಾಸ್ಪೃಶ್ಯಸ್ಪರ್ಶಾದೌ ಮುನಿಪುಂಗವಾಃ ।
ಪ್ರಾಯಶ್ಚಿತ್ತಂ ಪ್ರವಕ್ಷ್ಯಾಮಿ ಶೃಣುಧ್ವಮವಧಾನತಃ ॥"

ಇತ್ಯಾದಿ ವಚನಗಳಿಂದ ಸಂಪ್ರೋಕ್ಷಣೆ ಆವಶ್ಯಕವೆಂಬುವದಕ್ಕೆ ಏನು ಬಾಧಕ ? ಮೊದಲು ಶಿಲ್ಪಿಯಿಂದ ಒಂದು ಬಿಮ್ಬವು ನಿರ್ಮಿಸಲ್ಪಟ್ಟು ಕೆಲವುಕಾಲ ಪೂಜೆಯೇ ಇಲ್ಲದೇ ಆಗಲಿ ಅಥವಾ ಕೆಲವು ಕಾಲವು ಬೇರೆ ವಿಧವಾಗಿ ಪೂಜಿಸಲ್ಪಡುತ್ತಲೆ ಆಗಲಿ ಇದ್ದು ಅನಂತರ ಪಂಚರಾತ್ರಕ್ರಮವಾಗಿ

ಪ್ರತಿಷ್ಠೆಯನ್ನು ಮಾಡಿ ಪೂಜೆಯನ್ನುಪಕ್ರಮಿಸಿದ ಸ್ಥಲದಲ್ಲಿ ಅದೀಕ್ಷಿತ ಸ್ಪರ್ಶಾದಿಗಳು ಬಾಧಕಗಳಲ್ಲವೆಂದು ಪ್ರಮಾಣಬದ್ಧರು ಒಪ್ಪುವರೆ ?

ಸ್ವಯಂವ್ಯಕ್ತಾದಿಸ್ಥಳಗಳಲ್ಲಿಯೂ ಪ್ರತಿಷ್ಠಾವಿಷಯದಲ್ಲಿ ವಚನಗಳಿರುವವು. ಯಾವವೆಂದರೆ .—

ಮಾರ್ಕಂಡೇಯಸಂಹಿತಾಯಾಂ—

ಸ್ವಯಮೇವ ಸಮುತ್ಪನ್ನೇ ಶೈಲಬಿಂಬೇತು ದೇವರಾಟ್ ।
ಪಾರ್ಶ್ವಯೋಶ್ಚ ನದೀನಾಂಚ ತನ್ಮಧ್ಯೇದೃಶ್ಯತೇಯದಿ ।
ಇತ್ಯುಪಕ್ರಮ್ಯ—

ಯತ್ರಬಿಂಬಂ ಸಮುತ್ಪನ್ನಂ ತತ್ರಗೇಹಂತುಕಾರಯೇತ್ ।
ಪರ್ವತಸ್ಯಚಶೃಂಗೇವಾ ಪಾರ್ಶ್ವಯೋರುಭಯೋರಪಿ ॥
ತಂ ವಿಷ್ಣುಂ ಸ್ಥಾಪಯೇತ್ತತ್ರ ಸಾತ್ವತೋಕ್ತ ವಿಧಾನತಃ ॥
ಪ್ರಾಸಾದಾದೌ ವಿನಷ್ಟೇವಾ ಭಿನ್ನೇಚಾಪ್ಯಷ್ಟಬಂಧನೇ ।
ಗಜೈರ್ವಾಶತ್ರುಭಿಶ್ಚೋರೈಸ್ಸಂಕ್ಷೋಭೋ ಯದಿದೇವರಾಟ್ ।
ಪ್ರತಿಷ್ಠಾಂಪೂರ್ವವತ್ಕುರ್ಯಾದಿತಿ ಶಾಸ್ತ್ರಸ್ಯ ನಿಶ್ಚಯಃ ॥ ಇತಿ

ನಾರದಸಂಹಿತಾಯಾಂ—

ಏವಂಜೀರ್ಣವಿಮಾನಾದೌ ಸಂಸ್ಕುರ್ಯಾತ್ಸಿದ್ಧನಿರ್ಮಿತೇ ।
ಏವಮೇವ ಸ್ವಯಂವ್ಯಕ್ತಬಿಂಬೇನಾಯತೆನೇದ್ವಿಜ ॥ ಇತಿ

೩ ಪಂಚರಾತ್ರರೀತ್ಯಾ ಪ್ರತಿಷ್ಠಿತರಾದಾಗ್ಯೂ ಸೂತಸಂಹಿತೆಯಲ್ಲಿರುವ ತಂತ್ರೋಕ್ತೇನೇತ್ಯಾದಿ ವಚನಕ್ಕೂ ಪಂಚರಾತ್ರಾಗಮದಲ್ಲಿರುವ ವಚನಗಳಿಗೂ ಐಕಕಣ್ಠ್ಯಕ್ಕಾಗಿ ಇವರು ಹೇಳಿದಂತೆ ಉತ್ಸರ್ಗಾಪವಾದ ನ್ಯಾಯಸಂಚಾರವೂ ಮತ್ತು ಅರ್ಥವಾದರೂಪತ್ವಸ್ವೀಕಾರ ಮಾಡತಕ್ಕದ್ದು ಆವಶ್ಯಕವೆಂದು ಪ್ರೊಪ್ಪಿದಾಗ್ಯೂ ಸೂತಸಂಹಿತೆಯ ವಚನಕ್ಕೆ ಪಂಚರಾತ್ರತಂತ್ರಾ ತಿರಿಕ್ತತಂತ್ರಪ್ರತಿಷ್ಠಿತದೇವತಾಪರತ್ವವನ್ನು ಕಲ್ಪಿಸಿ

ದರೂ ಸೂತಸಂಹಿತಾ ವಚನಕ್ಕೆ ಅರ್ಥವಾದರೂಪತ್ವವನ್ನು ವೈದಿಕ ಪ್ರಶಂಸಾಪರತ್ವವನ್ನು ಹೇಳಿದರೂ ವಿರೋಧ ಪರಿಹಾರವಾಗುವದರಿಂದ ಪಂಚರಾತ್ರಾಲಯದಲ್ಲಿ ಅದೀಕ್ಷಿತರು ಪೂಜೆಮಾಡಿದರೆ ಸಂಪ್ರೋಕ್ಷಣೆ ಕೂಡ ದೆಂಬ ಅಂಶವು ಸಿದ್ಧಿಸಲಾರದು

೪ "ವೈಷ್ಣವರು ಉದಾಹರಿಸಿರುವ ವಚನಗಳಲ್ಲಿ ಕೆಲವು ವಚನಗಳು ಅನನ್ವಿತಗಳಾಗಿರುವವಲ್ಲದೆ ಬಹಳ ವಚನಗಳು ಇವರ ಉದ್ದೇಶ್ಯಕ್ಕೆಸಾಧಕ ಗಳಲ್ಲದೆ ಬೇರೆಅರ್ಥವನ್ನು ಕೊಡತಕ್ಕವುಗಳಾಗಿರುತ್ತವೆ" ಏಂಬುವದು.

ಕೆಲವು ವಚನಗಳು ಇವರಿಗೆ ಅನ್ವಯ ತೋರದೆ ಇರುವದರಿಂದ ಅನನ್ವಿತಗಳಾಗಿರಲಿ "ಬಹಳ ವಚನಗಳು ಇವರ ಉದ್ದೇಶ್ಯಕ್ಕೆ ಸಾಧಕ ಗಳಲ್ಲದೆ ಬೇರೆ ಅರ್ಥಗಳನ್ನು ಕೊಡತಕ್ಕವುಗಳಾಗಿವೆ" ಎಂಬುವವನ್ನು ಅಂಗೀಕರಿಸೋಣ. ಇವರರೀತ್ಯಾ ಅನನ್ವಿತವೂ ಅಲ್ಲದೆ ಬೇರೆ ಅರ್ಥವನ್ನು ಕೊಡುವದೂ ಅಲ್ಲದೆ ಇರುವ

ಅದೀಕ್ಷಿತೈ ರನ್ಯತನ್ತ್ರದೀಕ್ಷಿತೈ ರರ್ಚಕೇ ತರೈಃ ।
ಸ್ಪೃಷ್ಟೇಬಿಮ್ಬೇ ತಥಾಕುರ್ಯಾತ್ಸ್ನಪನಂ ತ್ವಧಮಾಧಮಂ ।
ಶಾನ್ತಿಹೋಮಂ ಜಪಂಚಾಪಿ ತದ್ದೋಷಸ್ಯ ಪ್ರಶಾನ್ತಯೇ ।
ಏತೇಷಾಂಗರ್ಭಗೇಹಾನ್ತಃ ಪ್ರವೇಶೇನ ವಭಿರ್ನಟೈಃ ।
ಸಂಸ್ನಾಪ್ಯದೇವದೇವೇಶಂ ಶಾನ್ತಿಹೋಮಾದಿಕಂಚರೇತ್ ।
ಸ್ತ್ರೀಭಿರ್ನಾನುಪನೀತೈರ್ವಾತಥಾವೈಖಾನುಸೈರ್ದ್ವಿಜೈಃ ।
ಅವೈಷ್ಣವೈರ್ವಾಸಂ ಸ್ಪೃಷ್ಟೇಬಿಮ್ಬೇತ್ವಧಮಮಧ್ಯಮಂ।
ಸ್ನಪನಂವಿಧಿವತ್ಕೃತ್ವಾ ಶಾನ್ತಿಹೋಮಾದಿಕಂ ಚರೇತ್ ।
ಏತೈಃಪ್ರವಿಷ್ಟೇಗೇಹಾನ್ತ ರಧಮಾಧಮಮಾರ್ಗತಃ ।
ಸಂಸ್ನಾಪ್ಯ ವಿಧಿವದ್ದೇವಂ ಶಾನ್ತಿಹೋಮಂಸಮಾಚರೇತ್ ।

ಇತ್ಯಾದಿವಿಶ್ವರ ಸಂಹಿತಾಪ್ರಾಯಶ್ಚಿತ್ತಾಧ್ಯಾಯಸ್ಥವಚನಗಳಿಂದ

ಸಂಪ್ರೋಕ್ಷಣೆ ಮಾಡುವದು ಸಿದ್ಧಿಸುವುದಕ್ಕೆ ಅಡ್ಡಿಯೇನಿಧೆ. ಈ ವಚನಗಳನ್ನೆಲ್ಲಾ ಕಲ್ಪಿತವೆಂದು ಹೇಳುವವಾದರೆ ಮನ್ವಾದಿಸ್ಮೃತಿವಚನಗಳಿಗೂ ಕಲ್ಪಿತತ್ವವನ್ನು ಹೇಳಬೇಕಾಗಿಬರುವದು ಇವರು ಹೇಳಿದಮಾತ್ರದಿಂದ ನಮಿಗೆ ಯಾವಬಾಧಕವೂ ಇಲ್ಲ. ಯಾವದುತಾನೆ ಇವರು ಹೇಳಲಾರರು. ಇಷ್ಟುತಾನೆ ಯಾಕೆ ಇವರಿಗೆ ಪ್ರಯಾಸವೋ ? ವೈಷ್ಣವ ಸಂಘದವರು ಶಾಸ್ತ್ರಾರ್ಥನಿಷ್ಕರ್ಷೆ ಮಾಡಲೇಯಿಲ್ಲವೆಂದು ಮಾತನ್ನಾಡುವದು ಸುಲಭವಾದ ಸಮಾಧಾನವಲ್ಲವೇ ?

ಈರೀತಿಯಾಗಿ ಇವರ ಹೇತುಗಳನ್ನು ಅಸಿದ್ಧವೆಂದೆಣಿಸದೆ ವಾಸ್ತವವೆಂದಂಗೀಕರಿಸಿದರೂ ಸಂಪ್ರೋಕ್ಷಣೆ ಕೂಡದೆಂಬ ಅಂಶವು ಆ ಹೇತುಗಳಿಂದ ಸಿದ್ಧಿಸಲಾರದೆಂದು ನಿರೂಪಿಸಲ್ಪಟ್ಟಿತು

ಇವರು ಹೇಳಿದ ಹೇತುಗಳೇ ಅಸಿದ್ಧವಾದವುಗಳೆಂದು ಮುಂದೆ ವಿಸ್ತರವಾಗಿ ನಿರೂಪಿಸಲ್ಪಡುವದು

ಮೊದಲು ಇವರು ಇಟ್ಟುಕೊಂಡಿರುವ ಅಖಂಡಾದ್ವೈತಸಭೆಯೆಂಬ ಹೆಸರಿನಿಂದಲೇ ತಾವು ಮಾತನಾಡುವ ಮಾತುಗಳಲ್ಲಿ ಸ್ಫುಟವಾದ ದೋಷಗಳೇ ಇವರಿಗೆ ಗೋಚರವಾಗದೆ ಇರುತ್ತೆಂಬುವದು ಸ್ಪಷ್ಟವಾಗುತ್ತೆ; ಹ್ಯಾಗೆಂದರೆ —

“ ಸಮಗ್ರಸಕಲಾಖಂಡಪೂರ್ಣಾದೀನ್ಯಪ್ಯನೂನಕೆ ” ಎಂಬ ಕೋಶವಚನದಿಂದ ಅಖಂಡಶಬ್ದವು ಸಕಲಶಬ್ದಕ್ಕೆ ಪರ್ಯಾಯವಾಗಿರುವದು ಸಕಲ ಶಬ್ದವು ಅನೇಕವಾಗಿರುವ ವಸ್ತುಗಳಿಗೆ ವಿಶೇಷಣವಾಗಿ ಪ್ರಯೋಗಿಸಲ್ಪಡುವದು. ಸಕಲಪಂಡಿತರು, ಸಕಲಬ್ರಾಹ್ಮಣರು, ಇತ್ಯಾದಿಗಳು ಉದಾಹರಣೆಗಳಾಗಿರುವವು. ಹೀಗಿರುವಲ್ಲಿ ಅದ್ವೈತವೆಂಬುವದು ಏಕವಸ್ತುವಾದುದರಿಂದ ಅದಕ್ಕೆ ಅಖಂಡಪದವನ್ನು ವಿಶೇಷಣವಾಗಿ ಪ್ರಯೋಗಿಸುವದು ಸಕಲಬ್ರಹ್ಮವೆಂಬುವಂತೆ ಅಸಂಗತವು. ಒಂದುವೇಳೆ ಉದಾಹರಿಸಿದ

ಕೋಶಾನುಸಾರಿಯಾದ ಅಖಂಡ ಶಬ್ದದ ರೂಢ್ಯರ್ಥವನ್ನು ಪರಿತ್ಯಜಿಸಿ ಯೌಗಿಕಾರ್ಥವನ್ನು ಇಲ್ಲಿ ವಿವಕ್ಷಿಸುವೆವು ಎಂಬು ಹೇಳಿದರೂ ಆಗ್ಯೆ " ಖಡಿ ಭೇದನೆ " ಎಂಬ ಧಾತುವಿನಿಂದ ನಿಷ್ಪನ್ನನಾದ ಖಂಡ ಶಬ್ದಕ್ಕೆ ಭೇದವು ಅರ್ಥವಾಗಿರುವದು ಅಖಂಡವಂದರೆ ಭೇದವಿಲ್ಲದಿರುವದೆಂದು ಅರ್ಥವಾಗು ನದು. ಹಾಗಾದರೆ ಅಖಂಡವೆಂಬುವದೂ, ಅದ್ವೈತವೆಂಬುವದೂ ಒಂದೇ ಅರ್ಥವಾಗಿರುವದರಿಂದ ಇವುಗಳಿಗೆ ವಿಶೇಷಣ ವಿಶೇಷ್ಯಭಾವದಿಂ ಪ್ರಯೋಗಿ ಸುವದು ತಲೆಶಿರೋಭಾರ, ನರಮನುಷ್ಯರು, ಇತ್ಯಾದಿ ಪ್ರಯೋಗಗಳಂತೆ ಇರುವದು ಮತ್ತು ಸಭಾಶಬ್ದಕ್ಕೆ ಉಪಪದವಾಗಿ ಸಭ್ಯರನ್ನು ತಿಳಿಸುವ ಪದವಾಗಲಿ ಸಭಾಪ್ರೇರಕರನ್ನು ಬೋಧಿಸುವ ಪದವಾಗಲೀ ಪ್ರಯೋಗಿಸಲ್ಪ ಡುವದು ಪಂಡಿತಸಭಾ, ರಾಜಸಭಾ, ಇತ್ಯಾದಿಗಳು ಉದಾಹರಣೆಗಳಾಗಿರು ವವು. ಪ್ರಕೃತದಲ್ಲಿ ಅದ್ವೈತಪದವು ಎರಡುವಿಧವಾದದ್ದೂ ಅಲ್ಲವು ಆದುದರಿಂದ ಅದ್ವೈತಸಭಾ ಎಂದು ಹೇಳುವದೇ ಅಸಂಗತವು. ಅದ್ವೈತಿಸಭೆ ಎಂದು ಹೆಸರನ್ನು ತಿದ್ದಿಕೊಳ್ಳುವದು ಯುಕ್ತವಾಗಿರುವದು ಬೇರೇವಿಧವಾಗಿ ಕ್ಲಿಷ್ಟಗತಿಯಿಂದ ನಾಮಧೇಯವನ್ನು ಇವರು ನಿರ್ವಹಿಸುವಪಕ್ಷಕ್ಕೆ ಯಾವ ದುತಾನೆ ಯಾರುತಾನೆ ನಿರ್ವಾಹವಮಾಡಲಾರರು ಎಂದು ಯೋಚಿಸಿ ಇತರರನ್ನು ತಾವು ಆಕ್ಷೇಪಿಸುವದು ತಪ್ಪು ಎಂದು ನಿರ್ಣಯಿಸಿಕೊಳ್ಳಬೇಕು.

ಅಖಿಲವೈಷ್ಣವ ಸಭೆಯವರ ಉದ್ದೇಶ್ಯಗಳನ್ನು ಅನುವಾದ ಮಾಡಿ ಇವು ಷಡ್ವರ್ಗರೂಪವಾಗಿ ಯಿಛೆ ಯೆಂದು ಬರೆದು ಇರುತ್ತಾರೆ. ತಮಗೆ ಇರುವ ಷಡ್ವರ್ಗ ಪ್ರಾಭವವನ್ನು ಎಲ್ಲರಿಗೂ ಪ್ರಕಾಶಪಡಿಸಬೇಕೆಂಬ ತಾತ್ಪರ್ಯ ದಿಂದಲೇ ಯೀರೀತಿ ಬರದುಯಿರುವಹಾಗೆ ತೋರುತ್ತೆ, ಹ್ಯಾಗಂದರೆ--

ಶ್ರೀರಂಗಪಟ್ಟಣದ ಮಹಾಜನಗಳ ಪ್ರೊಸಿಡಿಂಗ್ಸಿನ ೪ನೆ ಪೇಜಿನಲ್ಲಿ ಈ ಸಭೆಯವರ ಉದ್ದೇಶ್ಯವು ೫ ಆಗಿಯೆ ವಿಭಾಗಿಸಲ್ಪಟ್ಟಿರುತ್ತೆ. ವೈಸೂ ರಲ್ಲಿ ನಡದ ಅಖಿಲವೈಷ್ಣವ ಸಭೆಯಲ್ಲಿ ಶ್ರೀರಂಗಪಟ್ಟಣದವರು ನಿರ್ದೇಶಿಸಿದ

೫ ವಿಷಯುಗಳಲ್ಲಿ ಮೊದಲಿನ ೩ ವಿಷಯುಗಳು ಪ್ರಕೃತದಲ್ಲಿ ಈ ಸಭೆಯುವರು ಮಾಡುವ ತೀರ್ಮಾನದಲ್ಲಿ ಸೇರಿಸುವದು ಅಪ್ರಕೃತವೆಂದು ಪರ್ಯಾಲೋಚಿಸಿ ನಾಲ್ಕೈದನೆ ವಿಷಯುಗಳನ್ನೆ ವಿಚಾರಿಸಿ ತೀರ್ಮಾನಿಸಿದಹಾಗೆ ೧೫-೧೬ನೆ ಪೇಜು ಗಳಲ್ಲಿ ಇರುವದು. ಹೀಗಿರುವಲ್ಲಿ ನನಿಗೆ ೬ ಉದ್ದೇಶ್ಯಗಳೆಂದು ಇವರು ಹೇಳುವದು ಶುದ್ಧವಾಗಿ ಅಸಂಗತಗಳಾಗಿವೆ.

" ಮೊದಲು ಶ್ರೀವೈಷ್ಣವರಗುಂಪಿಗೆ ಇಟ್ಟುಕೊಂಡಿರುವ ಅಖಿಲವೈ ಷ್ಣವಸಭಾಯೆಂಬ ನಾಮಧೇಯುವೇ ಅಪಾರ್ಥಕವಾಗಿ ಇರುವದ್ದರಿಂದ ಅಂಥಾ ಹೆಸರನ್ನ ಯಿಟ್ಟುಕೊಂಡದ್ದೇ ತಪ್ಪಾಗಿಯಿಧೆ, ಅದು ಯಾತಕ್ಕಂದರೆ ಈ ಸಭೆಗೆ ಬಾರದೆ ಇರುವ ಅನೇಕ ಕೋಟ್ಯಧಿಕರಾದ ವೈಷ್ಣವ ಮಹನೀಯರು ಇರಲಿಕಾಕ್ಕಗಿ ಇದು ಅಖಿಲವೈಷ್ಣವಮಹಾಜನಸಭಾ ಹ್ಯಾಗಾಯಿತೋ, ಅಥವಾ ಎತದ್ಸ್ನಾನುವಾಸಿ ಅಖಿಲವೈಷ್ಣವ ಮಾಹಾಜನಗಳೆಂದು ಅಖಿಲಪ ದಕ್ಕೆ ಅರ್ಥಸಂಕೋಚವನ್ನು ಕಲ್ಪಿಶಿಪಾಗ್ಯೂ ಈ ಸಭೆಗೆ ಶೇರದೇಯಿರುವ ಅನೇಕವೈಷ್ಣವಮಹನೀಯರು ಯಿಾಗ್ರಾಮದಲ್ಲಿಯೆ ಇರುವದ್ದರಿಂದ ಇದು ಸರ್ವಧಾ ಅಖಿಲವೈಷ್ಣವ ಮಹಾಜನಸಭೆಯಾಗುವದಿಲ್ಲ. ಈ ಸಭಾನಾಮಧೇ ಯುವು ಹ್ಯಾಗೆಬಾಧಿತಾರ್ಥವಾಗಿ ಇಧೆಯೊ ಅದರಂತೆ ಇದರಲ್ಲಿ ನಿಶ್ಚಿತವಾದ ಅಂ ಶವೂ ಬಾಧಿತವಾಗಿಯೆ ಇರುವದಕ್ಕೆ ಸಂದೇಹವಿಲ್ಲಾ ಎಂಬದಾಗಿ ಊಹಿಸಬ ಹುದು " ಎಂದು ಪ್ರೊಸಿಡಿಂಗ್ಸಿನಲ್ಲಿ ಬರದಿರುತ್ತಾರೆ.

ಇವರು ಜಗದ್ಗುರು ಶಬ್ದವನ್ನು ಬಾರಿಬಾರಿಗೂ ಬರಿಯು ತ್ತಾ ಪುಸ್ತಕವನ್ನ ಪೂರ್ಣಮಾಡಿಯಿರುತ್ತಾರೆಯಷ್ಟೆ. ಕೆಲವು ಜನಗಳಿಗೆ ಮಾತ್ರ ಒಬ್ಬರು ಗುರುಗಳೇ ವಿನಾ ಪ್ರಾಣ್ಯಪ್ರಾಣಿಸಮುದಾಯರೂಪ ವಾದ ಜಗತ್ತಿಗೆಲ್ಲಾ ಗುರುಗಳಲ್ಲವಷ್ಟೆ, ಹೀಗಿದ್ದರೂ ತಾವು ಕಲ್ಪಿಶಿಕೊಂಡಿ ರುವ ಜಗದ್ಗುರುನಾಮಧೇಯುದಲ್ಲಿರುವ ಬಾಧಿತಾರ್ಥವನ್ನು ಯೋಚಿಸದೆ ಅಖಿಲವೈಷ್ಣವಸಭಾನಾಮಧೇಯುದಲ್ಲಿ ಇಲ್ಲದ ದೋಷವನ್ನು ಆಕ್ಷೇಪಿಸು

ವದು ಆಶ್ಚರ್ಯಕರವಾಗಿರುವದು. ಜಗದ್ಗುರು ನಾಮಧೇಯದಲ್ಲಿರುವ ಜಗತ್ಪದಕ್ಕೆ ಅವರು ಯಾರಿಗೆ ಗುರುಗಳಾಗಿರುವರೊ ಆ ಜನಗಳು ಮಾತ್ರ ಅರ್ಥವೆಂದು ಹೇಳುವಪಕ್ಷಕ್ಕೆ ಅಖಿಲವೈಷ್ಣವ ಸಭಾನಾಮಧೇಯದಲ್ಲಿರುವ ಅಖಿಲ ಶಬ್ದಕ್ಕೂ ಅದೇರೀತಿಯಾಗಿ ಈ ಸಭೆಗೆ ಶೇರಿರುವ ಜನಗಳು ಮಾತ್ರ ಅರ್ಥವೆಂದು ಯಿವರಿಗೆ ಯಾತಕ್ಕೆ ಮನಸ್ಸಿಗೆ ಗೋಚರವಾಗಲಿಲ್ಲ ವಸ್ತುತಃ ಜಗದ್ಗುರು ಶಬ್ದವು ಸರ್ವಥಾಗೌಣವಾಗಿದ್ದರೂ ಅಖಿಲವೈಷ್ಣವ ಸಭಾನಾಮಧೇಯವು ಈ ನಮ್ಮ ಸಭೆಗೆ ಯಂದಿಗೂ ಗೌಣವಾಗಲಾರದು.

ಯಾತಕ್ಕೆಂದರೆ- ಯೀಸಭೆಯವರು ವೊಂದು ಸ್ಥಲದಲ್ಲಿ ವೊಂದು ದಿವಸ ನಡಶಿದ ವಿಚಾರಕಾಲದಲ್ಲಿ ಸ್ಥಲಾಂತರದವರು ಕೆಲವರು, ಯೀವೂರಿನಲ್ಲಿರುವ ಕೆಲವರೂ ಸಹಾ ಕಾರ್ಯಾಂತರಗಳಿಂದ ಆ ಸ್ಥಲಕ್ಕೆ ಬರುವದಕ್ಕೆ ಅನುಕೂಲವಾಗದೆ ಹೋದರೂ, ಆಸಭೆಯಲ್ಲಿ ನಡದ ವಿಚಾರವನ್ನು ಮತ್ತು ಸಭ್ಯರು ಮಾಡಿದ ನಿಷ್ಕರ್ಷೆಯನ್ನು ಅಂದರೆ ತೀರ್ಮಾನವನ್ನು ವೈಷ್ಣವಲಕ್ಷಣವುಳ್ಳ ಸಕಲರೂ ಒಪ್ಪಿಕೊಂಡಿರುವರೆ ವಿನಾ ವಿರೋಧಾಭಿಪ್ರಾಯವುಳ್ಳವರು ವೊಬ್ಬರೂ ಯಿಲ್ಲ. ಆದ್ದರಿಂದ ಅಖಿಲವೈಷ್ಣವರೂ ಯೀಸಭೆಗೆ ಶೇರಿದವರಾಗಿಯೆ ಇಧಾರೆ ಆದಕಾರಣ ಅಖಿಲವೈಷ್ಣವಸಭಾನಾಮಧೇಯದಲ್ಲಿ ಯಾವದೋಷವೂ ಇಲ್ಲ. [ಮತ್ತು ಯೀ ನಾಮಧೇಯದಲ್ಲಿ ಅಖಿಲ ಪದದ ಅವಯವಾರ್ಥದಿಂದ ಮತ್ತೊಂದು ವಿಶೇಷಾರ್ಥವು ಸೂಚಿಸಲ್ಪಟ್ಟಿರುವದು. ಏನಂದರೆ— ಜಗಜ್ಜನ್ಮಸ್ಥಿತಿ ಲಯನಿದಾನನಾದ ಭಗವಂತನಿಂದ ಸೃಷ್ಟ್ಯನಂತರ ವೇದಗಳನ್ನು ತತ್ಸಮಾನವಾದ ಆಗಮಗಳನ್ನೂ ಸಾಕ್ಷಾತ್ತಾಗಿ ಬ್ರಹ್ಮಾದಿಗಳಿಗೆ ಉಪದೇಶಿಶಿ ಸ್ಮೃತೀತಿಹಾಸಪುರಾಣಾದಿಪ್ರಮಾಣಗಳನ್ನು ವೈಷ್ಣವಾಗ್ರೇಸರರಾದ ಮಹರ್ಷಿಗಳ ಮೂಲಕ ಪ್ರಚುರಗೊಳಿಶಿ ವೈಷ್ಣವಸಿದ್ಧಾಂತವು ಅನುಷ್ಠಾಪಿಸಲ್ಪಟ್ಟಿದ್ದಾಗ್ಯೂ ಅಸುರವ್ಯಾಮೋಹನಾರ್ಥವಾಗಿ ಪ್ರವೃತ್ತವಾದ ಕೆಲವು ಪ್ರಮಾಣಾಭಾಸಗಳಿಂದ ಮೋಹಗೊಂಡು ಪ್ರಾರ್ಶ್ವೋ

ತ್ತರ ಸಂದರ್ಭಗಳನ್ನು ಸಹ ಪರ್ಯಾಲೋಚಿಸದೆ ಪ್ರಬಲತರಪಾಪವಶದಿಂ ಶ್ರುತಿವಿರುದ್ಧವಾದ ಲಾಂಛನಗಳನ್ನು ಧರಿಶಿ ಅನಾದಿಕಾಲಪ್ರಾಪ್ತವಾದ ವೈಷ್ಣವತ್ವಕ್ಕೂ ಕೊನೆಗೆ ಸರ್ವೋತ್ತಮವಾದ ಬ್ರಾಹ್ಮಣ್ಯಕ್ಕೂ ಖಿಲತ್ವ ವನ್ನು ಅಂದರೆ ಶೈಥಿಲ್ಯವನ್ನು ಉಂಟುಮಾಡಿಕೊಳ್ಳಲಿಕ್ಕೆ ಉಪಕ್ರಮಿಶಿ ಯಿರುವವರು ಖಿಲವೈಷ್ಣವರೆಂದು ಹೇಳಲ್ಪಡುವರು.

" ವಿಪಕ್ಷಮಖಿಲೀಕೃತ್ಯ "

ನಾರಾಯಣಾತ್ಸಮುತ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಂ ।

ಕಿಂಚಿತ್ತದನ್ಯಥಾಭೂತಂ ತ್ರೇತಾಯಾಂ ದ್ವಾಪರೇ ಖಿಲಂ ।

ಇತ್ಯಾದಿಸ್ಥಲಗಳಲ್ಲಿ ಖಿಲಪದವು ಉತ್ಪನ್ನಪರವಾಗಿಯೂ ಮಿಥ್ಯಾಜ್ಞಾ ನದೂಷಿತಪರವಾಗಿಯೂ ಇರುವದಷ್ಟೆ ಹೀಗೆ ಮೋಹವನ್ನು ಹೊಂದದೆ ಯಾವಕಾಲದಲ್ಲಿಯೂ, ಯಾವ ಅವಸ್ಥೆಯಲ್ಲಿಯೂ ತಮ್ಮ ಅನಾದಿಸಿದ್ಧವಾದ ವೈಷ್ಣವತ್ವಕ್ಕೆ ಲೇಶವಾದರೂ ಶೈಥಿಲ್ಯವನ್ನು ಉಂಟುಮಾಡಿಕೊಳ್ಳದೆ ಅವಿಚ್ಛಿನ್ನನಾವಿ ಸಂಪ್ರದಾಯಾನುಗತರಾದ ವೈಷ್ಣವರಿಗೆ ಅಖಿಲವೈಷ್ಣ ವರೆಂದುನಾಮಧೇಯವು ಅನ್ವರ್ಥವಾಗಿರುವದು ಇಂಥಾ ಅಖಿಲವೈಷ್ಣ ವರ ಸಭೆಯೆಂದು ಈ ನಾಮಧೇಯಕ್ಕೆ ಅರ್ಥವು.

[ " ಪ್ರಕೃತವಲ್ಲಿ ಈ ವಚನಗಳು ಇಧೆಯೆಂದು ಹೇಳುವ ಭಗವ ಚ್ಛಾಸ್ತ್ರವೆಂದು ಇವರೇ ಹೊಸದಾಗಿ ಇಟ್ಟಿರುವ ಹೆಸರನ್ನು ಹೊಂದಿದ ಪಂಚರಾತ್ರಾದ್ಯಾಗಮಗಳೇ ವೇದಾಧಿಕಾರವುಳ್ಳ ಬ್ರಾಹ್ಮಣರುಗಳಿಗೆ ಮುಖ್ಯ ವಾದ ಪ್ರಮಾಣಗಳಲ್ಲವು ಮತ್ತು ಇವರು ಉದಹರಿಸಿಯಿರುವ ವಚ ನಗಳಲ್ಲಿ ಕೆಲವು ವಚನಗಳು ಆಧುನಿಕ ಶ್ರೀವೈಷ್ಣವರಿಂದ ಕಲ್ಪಿತಗಳಾಗಿ ಈ ಆಗಮಗಳಲ್ಲಿ ಸೇರಿಸಲ್ಪಟ್ಟವುಗಳಾಗಿಯೂ ಇರುತ್ತವೆ ಆದ್ದರಿಂದ ಪ್ರಮಾ ಣಗಳೆಂದೆಣಿಸುವದಕ್ಕಾಗುವದಿಲ್ಲ ಪ್ರಥಮತಃ ಶ್ರುತಿಗಳು ಸ್ವತಂತ್ರ ಪ್ರಮಾಣಗಳು ಅದಕ್ಕೆ ಅವಿರುದ್ಧವಾಗಿ ಮಹರ್ಷಿಗಳಿಂದ ಹೇಳಲ್ಪಟ್ಟ

ಸ್ಮೃತಿಗಳು ಪ್ರಮಾಣಗಳು. ಈ ಶ್ರುತಿ ಸ್ಮೃತಿಗಳಿಗೆ ಅವಿರುದ್ಧವಾದ ಅಷ್ಟಾದಶಪುರಾಣಗಳು ಪ್ರಮಾಣಗಳು ಈ ಶ್ರುತಿಸ್ಮೃತಿ ಪುರಾಣಗಳಿಂದ ಬಾಧಿಸಲ್ಪಡದೇಯಿರುವ ಅರ್ಥವನ್ನು ಹೇಳತಕ್ಕ ಧರ್ಮಶಾಸ್ತ್ರಾದಿಗಳು ಪ್ರಮಾಣವೆಂದು ಹೇಳಬಹುದು ಪ್ರಕೃತದಲ್ಲಿ ಪಂಚರಾತ್ರಾಗಮವು ಅನೇಕ ಪುರಾಣಗಳಿಂದ ವೇದಾಧಿಕಾರವಂ ಕಳಕೊಂಡವನ ಪರಗಳೆಂದು ನಿರ್ಧರಿಸಲ್ಪಟ್ಟಿರುವದ್ದರಿಂದ ಇದು ಬ್ರಾಹ್ಮಣರಿಗೆ ಮುಖ್ಯ ಪ್ರಮಾಣ ವೆನ್ನಿಸಿಕೊಳ್ಳಲಾರದು. * ] ಎಂದು ಬರದಿರುತ್ತಾರೆ.

ಶ್ರೀಪಂಚರಾತ್ರಾಗಮಕ್ಕೆ ಭಗವಂತನಾದ ವಾಸುದೇವನೇ

"ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಸ್ಸ್ವಯಂ"

ಇತ್ಯಾದಿ ಮಹಾಭಾರತಾದಿ ಪ್ರಮಾಣಗಳಿಂದ ಪ್ರತಿಪಾದ್ಯನಾಗಿಯೂ, ಪ್ರವಕ್ತೃವಾಗಿಯೂ ಆಗಿರುವದ್ದರಿಂದಲೂ ಭಗವಚ್ಛಬ್ದಕ್ಕೆ ವಾಸುದೇ ವನೇ ಅರ್ಥವೆಂದು ಶ್ರೀ ಶಂಕರಾಚಾರ್ಯರೇ ಹೇಳಿಯಿರುವದ್ದರಿಂದಲೂ ಭಗ ವಂತನಾದ ವಾಸುದೇವನನ್ನು ಪ್ರಾಧಾನ್ಯೇನ ಬೋಧಿಸುವ ಶ್ರೀಪಂಚ ರಾತ್ರಶಾಸ್ತ್ರಕ್ಕೆ ನಾವು ಬರೆದ ಭಗವಚ್ಛಾಸ್ತ್ರವೆಂಬ ಹೆಸರು ಇವರು ಒಪ್ಪಿಕೊಳ್ಳಬೇಕಾಗಿಯೇ ಯಿರುವದು. ಒಂದುವೇಳೆ ಈ ಪ್ರೊಸೀಡಿಂಗ್ಸಿನಲ್ಲಿ ನಾವು ಹೊಸದಾಗಿ ಹೆಸರನ್ನು ಬರದೆವೆಂದು ಇವರಿಗೆ ಭ್ರಾಂತಿ ಇರಬ ಹುದು ; ಹಾಗಿದ್ದ ಪಕ್ಷದಲ್ಲಿ--

"ಆಚಾರ್ಯಂವರಯೇತ್ಪೂರ್ವಂ ಭಗವಚ್ಛಾಸ್ತ್ರಕೋವಿದಂ"

ಇತ್ಯಾದಿ ಪಂಚರಾತ್ರಾಗಮಸಂಹಿತಾವಚನಗಳನ್ನು ಭಾಷ್ಯಕಾರರುಗಳಿಗಿಂತ ಲೂ ಪೂರ್ವದಲ್ಲಿದ್ದವರುಮಾಡಿದ ಕಾಶ್ಮೀರಾಗಮಪ್ರಾಮಾಣ್ಯ ಆಗಮಪ್ರಾಮಾ ಣ್ಯಾದಿ ನಿಬಂಧನ ಗ್ರಂಥಗಳನ್ನೂ ವಿದ್ಯಾರಣ್ಯರಿಗಿಂತಲೂ ಪೂರ್ವದಲ್ಲಿದ್ದ ವರು ಮಾಡಿದ ಶ್ರುತಪ್ರಕಾಶಿಕಾ, ಶ್ರೀಪಾಂಚರಾತ್ರರಕ್ಷಾದಿ ಗ್ರಂಥಗಳನ್ನೂ ಇವರು ಸ್ವಲ್ಪ ನೋಡಿದರೆ ಈ ಭ್ರಾಂತಿಯು ಇವರಿಗೆ ನಿವರ್ತಿಸುವದು

ಮುಖ್ಯವಾಗಿ ಶ್ರೀ ಶಂಕರಾಚಾರ್ಯರವರು ಮಾಡಿದ ಬ್ರಹ್ಮಸೂತ್ರಭಾಷ್ಯ ದಲ್ಲಿ ಉತ್ಪತ್ತ್ಯಸಂಭವಾಧಿಕರಣದಲ್ಲಿ ಇರುವ

' ತತ್ರಭಾಗವತಾಮನ್ಯಂತೆಭಗವಾನೆ ಕೋವಾಸುದೇವಃ '

ಇತ್ಯಾದಿ ಪಂಚರಾತ್ರ ಮತಾನುವಾದ ಪಙ್ಕ್ತಿಯನ್ನು ನೋಡಿದ್ದರೂ ಅಥವಾ ಕೇಳಿದ್ದರೂ ಇಂಥಾ ಮಾತನ್ನು ಎಂದಿಗೂ ಇವರು ಆಡಲಾರರು. ಇಷ್ಟುಮಾತ್ರವೇ ಅಲ್ಲ ಅಖಿಲನ್ವೈಷ್ಣವ ಸಭೆಯವರ ಪ್ರೊಸಿಡಿಂಗ್ಸಿನಲ್ಲಿ ಉದಾಹರಿಶಿರುವ

" ಆದೌಮಯಾಭಗವತಾಶಾಸ್ತ್ರಮೆತದುದೀರಿತಂ ।

ತಸ್ಮಾದ್ಭಾಗವತಂ ಶಾಸ್ತ್ರ ಮಿತಿಲೋಕೆ ಮಹೀಯತೆ ॥ "

ಇತ್ಯಾದಿ ವಾಮನಸಂಹಿತಾವಚನವನ್ನು ಇವರ ಪ್ರೊಸಿಡಿಂಗ್ಸಿನಲ್ಲಿ ೩೦ ನೇ ಪುಟದಲ್ಲಿ ಉದಾಹರಿಸುವಾಗ ಅದರ ಅರ್ಥಪರ್ಯಾಲೋಚನೆಯನ್ನು ಮಾಡಿರುವಪಕ್ಷದಲ್ಲಿಯೂ ಈ ಆಕ್ಷೇಪ ಮಾಡಲಾರರು ಇದು ಹೀಗಿರಲಿ.

[ ಪಂಚರಾತ್ರಶಾಸ್ತ್ರವು ವೇದಾಧಿಕಾರವುಳ್ಳ ಬ್ರಾಹ್ಮಣರಿಗೆ ಮುಖ್ಯ ವಾದ ಪ್ರಮಾಣವಲ್ಲವು.] ಮತ್ತು [ಇವರು ಉದಹರಿಶಿರುವ ವಚನಗಳಲ್ಲಿ-ಕೆಲ ವು ವಚನಗಳು ಆಧುನಿಕ ಶ್ರೀವೈಷ್ಣವರಿಂದ ಕಲ್ಪಿತವಾಗಿ ಈ ಆಗಮದಲ್ಲಿ ಶೇರಿಸಲ್ಪಟ್ಟದ್ದಾಗಿರುತ್ತೆ.] ಎಂದು ಇವರು ಬರಿಯುವಮಾತಿನಿಂದಲೇ ಇವರಿಗೆ ಈ ಅರ್ಥ ಸಿದ್ಧಿಸಲಾರದು. ಪ್ರತಿಜ್ಞಾಮಾತ್ರದಿಂದಲೇ ಆ ಅರ್ಥವು ಸಿದ್ಧಿಸು ವಪಕ್ಷದಲ್ಲಿ ವೇದವು, ಸ್ಮೃತಿಪುರಾಣಾದಿಗಳು, ಪ್ರಮಾಣವಲ್ಲವೆಂತಲೂ ಮತ್ತು ಅವುಗಳಲ್ಲಿ ಅನೇಕಭಾಗಗಳು ಕಲ್ಪಿತಗಳಾಗಿ ಆಧುನಿಕರಿಂದ ಶೇರಿಸಲ್ಪಟ್ಟ ದ್ದೆಂತಲೂ ಹೇಳುವ ನಾಸ್ತಿಕರಮತವನ್ನೇ ಇವರು ಪ್ರವೇಶಿಸಬೇಕಾಗಿಬರು ವದು. ಶಿಷ್ಟಪರಿಗ್ರಹೀತಗಳಾಗಿ ಬಹುಕಾಲಗಳಿಂದ ಕೋಶಗಳನ್ನು ರಕ್ಷಿಸುತ್ತಾ ಗ್ರಂಥಗಳಲ್ಲಿ ಉದಾಹರಿಸುತ್ತಾ ಇರುವ ವೇದಸ್ಮೃತ್ಯಾದಿಗ ಳಲ್ಲಿ ನಾಸ್ತಿಕರು ಮಾಡುವ ಆಕ್ಷೇಪಕ್ಕೆ ಅವಕಾಶವಿಲ್ಲವೆಂದು ಇವರು ಹೇಳು

ವಿಪಕ್ಷಕ್ಕೆ ಶ್ರೀಪಂಚರಾತ್ರಶಾಸ್ತ್ರದಲ್ಲಿಯೂ ಪ್ರಕೃತ ಇವರು ಮಾಡಿದ ಆಕ್ಷೇಪಕ್ಕೆ ಅದೇ ಸಮಾಧಾನವೆಂದು ತಿಳಿಯಬಹುದು ವೇದಸ್ಮೃತಿ ಪುರಾಣಾದಿಗಳನ್ನು ವಿಭಜಿಸಿರುವಹಾಗೆ ಶ್ರೀಪಂಚರಾತ್ರಶಾಸ್ತ್ರವು (೧೦೮) ಸಂಹಿತೆಗಳೆಂದು ವಿಭಜಿಸಲ್ಪಟ್ಟಿರುತ್ತೆ ವೇದಸ್ಮೃತ್ಯಾದಿ ಕೋಶಗಳಂತೆಯೇ ತತ್ತತ್ಸಂಹಿತಾಕೋಶಗಳು ನಾನಾ ದೇಶಗಳಲ್ಲಿಯೂ ಏಕಾನುಪೂರ್ವೀರೂಪವಾಗಿಯೇ ಕಂಡುಬರುತ್ತವೆ. ಹೀಗಿರುವಲ್ಲಿ ಅಂಥಾ ಕೋಶಗಳಲ್ಲಿರುವ ವಚನಗಳನ್ನು ಕಲ್ಪಿತಗಳೆಂದು ಇವರು ಹೇಳುವದು ಅತ್ಯಂತಾಸಂಗತವು ನಾವು ಉದಾಹರಿಸಿಯಿರುವ ವಚನಗಳಲ್ಲಿ ಕೆಲವು ವಚನಗಳು ಮಾತ್ರ ಆಧುನಿಕ ಶ್ರೀವೈಷ್ಣವರಿಂದ ಕಲ್ಪಿಸಿ ಸೇರಿಸಿಯಿರುತ್ತಾರೆಂದು ಹೇಳಿಯಿರುವದ್ದರಿಂದ ಉದಾಹರಿಸಿಯಿರುವ ಇತರಗಳಾದ ಕೆಲವುವಚನಗಳು ಅಕಲ್ಪಿತವಾದದ್ದೆಂದುನ್ನೂ ಇವರು ಅಂಗೀಕಾರಪಟ್ಟಿರುವದಾಗಿ ಇದೆ. ಇದರಿಂದ ಇವರ ಪ್ರಾಮಾಣಿಕತೆಯನ್ನು ನಾವು ವಿಶೇಷವಾಗಿ ಶ್ಲಾಘಿಸಬೇಕಾಗಿಯಿರುವದು. ನಾವು ಉದಾಹರಿಸಿಯಿರುವ ಎಲ್ಲಾ ವಚನಗಳನ್ನು ಕಲ್ಪಿತಗಳೆಂದೇ ಇವರು ಹೇಳಿದರೆ ಇವರನ್ನು ಯಾರುತಾನೆ ಏನು ಮಾಡ್ಯಾರು ? [ ಪ್ರಥಮತಃ ಶ್ರುತಿಗಳು ಸ್ವತಂತ್ರಪ್ರಮಾಣಗಳು. ಅದಕ್ಕೆ ಆ ವಿರುದ್ಧವಾದ ಮಹರ್ಷಿಗಳಿಂದ ಹೇಳಲ್ಪಟ್ಟ ಸ್ಮೃತಿಗಳು ಪ್ರಮಾಣಗಳು. ಈ ಶ್ರುತಿಸ್ಮೃತಿಗಳಿಗೆ ಅವಿರುದ್ಧವಾದ ಅಷ್ಟಾದಶ ಪುರಾಣಗಳು ಪ್ರಮಾಣಗಳು. ] ಎಂದು ಇವರು ಬರದುಯಿರುವದರಲ್ಲಿ ಯಾರಿಗೂ ವಿಪ್ರತಿಪತ್ತಿಯಿಲ್ಲವು ಆದರೆ ಅದರಮೇಲೆ [ ಈ ಶ್ರುತಿಸ್ಮೃತಿ ಪುರಾಣಗಳಿಂದ ಬಾಧಿಸಲ್ಪಡದೇಯಿರುವ ಅರ್ಥವನ್ನು ಹೇಳತಕ್ಕ ಧರ್ಮಶಾಸ್ತ್ರಾದಿಗಳು ಪ್ರಮಾಣವೆಂದು ಹೇಳಬಹುದು. ] ಎಂದು ಬರೆಯಲ್ಪಟ್ಟಿದೆ ಧರ್ಮಶಾಸ್ತ್ರವೆಂಬುವದನ್ನು ಸ್ಮೃತಿ ಪುರಾಣಗಳಿಗಿಂತಲೂ ವ್ಯತಿರಿಕ್ತವಾದದ್ದೆಂದು ಬರದವರ ಪಾಂಡಿತ್ಯಮಹಿಮೆಯು ವರ್ಣಿಸಲಸಾಧ್ಯವು.

" ಶ್ರುತಿಸ್ತುವೇದೋವಿಜ್ಞೇಯೋ ಧರ್ಮಶಾಸ್ತ್ರಂ ತು ವೈಸ್ಮೃತಿಃ "
ಎಂಬುವ ಮನುಸ್ಮೃತಿ ವಚನದಿಂದ ಸ್ಮೃತಿಯೂ, ಧರ್ಮಶಾಸ್ತ್ರವೂ ಒಂದೇ ಎಂಬದಾಗಿ ಪಂಡಿತರಲ್ಲಿ ಪ್ರಸಿದ್ಧವಾಗಿಯಿರುವದು. ಇದು ಹೀಗಿರಲಿ

" [ ಪ್ರಕೃತದಲ್ಲಿ ಪಂಚರಾತ್ರಾದ್ಯಾಗಮಗಳು ಅನೇಕ ಪುರಾಣಗಳಿಂದ ವೇದಾಧಿಕಾರರಂ ಕಳಕೊಂಡವನ ಪರಗಳೆಂದು ನಿರ್ಧರಿಸಲ್ಪಟ್ಟಿರುವದ್ದರಿಂದ ಇದು ಬ್ರಾಹ್ಮಣರಿಗೆ ಮುಖ್ಯ ಪ್ರಮಾಣವೆನ್ನಿಸಿಕೊಳ್ಳಲಾರದು "] ಎಂದು ಬರೆಯಲ್ಪಟ್ಟಿರುತ್ತೆ. ಇದು ಯುಕ್ತವಲ್ಲ. ಅನೇಕ ಪುರಾಣಗಳಲ್ಲಿಯೂ ಪುರಾಣಗಳಿಗಿಂತಲೂ ವೇದೋಪಬೃಂಹಣವಿಷಯದಲ್ಲಿ ಅತಿಶ್ರೇಷ್ಠವಾದ ಮಹಾಭಾರತಾದೀತಿಹಾಸಗಳಲ್ಲಿಯೂ ಶ್ರೀಪಂಚರಾತ್ರಾಗಮವು ವೇದಸಮಾನವೆಂತಲೂ, ಶ್ರೇಷ್ಠರಾದ ಬ್ರಾಹ್ಮಣರುಗಳಿಗೆ ಪ್ರಮಾಣತಮವೆಂತಲೂ, ಮಹರ್ಷಿಪರಿಗ್ರಹೀತವೆಂತಲೂ ನಿರ್ಧರಿಸಲ್ಪಟ್ಟಿರುವದಲ್ಲದೆ ಇವರು ಬರೆಯುವಂತೆ ಎಲ್ಲಿಯೂ ನಿರ್ಧರಿಸಲ್ಪಟ್ಟಿರುವದಿಲ್ಲ ವೈದ್ಯನಾಥೀಯಕ್ಕಿಂತಲೂ ಪ್ರಾಚೀನರಾದ ವೈದಿಕಸಾರ್ವಭೌಮರಿಂದ ರಚಿತವಾದ ದಶನಿರ್ಣಯದಲ್ಲಿ ಉದಾಹರಿಸಿ ಇರುವ ಪಂಚಮವೇದವೆಂದು ಉದ್ಘೋಷಿಸಲ್ಪಟ್ಟ ಇತಿಹಾಸಶ್ರೇಷ್ಠವಾದ ಮಹಾಭಾರತದಲ್ಲಿರುವ ವಚನಗಳನ್ನು ನೋಡಿರಿ.

ಶ್ರೀಮನ್ಮಹಾಭಾರತೆ

ಸಾತ್ವತಂವಿಧಿಮಾಸ್ಥಾಯಗೀತಸ್ಸಂಕರ್ಷಣೇನ ಯಃ ।
ಇದಂಮಹೋಪನಿಷದಂಚತುರ್ವೇದಸಮನ್ವಿತಂ ।
ಸಾಂಖ್ಯಯೋಗಕೃತಾಂತೇನಪಂಚರಾತ್ರಾನುಶಬ್ದಿತಂ ।
ನಾರಾಯಣಮುಖೋದ್ಗೀತಂನಾರದೋಶ್ರಾವಯನ್ಮುನೀನ್ ॥
ಬ್ರಹ್ಮಣಸ್ಸದನೆತಾತಯಥಾದೃಷ್ಟಂಯಥಾಶ್ರುತಂ ।

ಇದಂಶ್ರೇಯಇದಂಬ್ರಾಹ್ಮಮಿದಂಹಿತಮನುತ್ತಮಂ ।
ಋಗ್ಯಜುಸ್ಸಾಮಭಿರ್ಜುಷ್ಟಮಥರ್ವಾಂಗಿರಸೈಸ್ತಥಾ ।
ಭವಿಷ್ಯತಿಪ್ರಮಾಣಂವೈಎತದೇವಾನುಶಾಸನಂ ।
ಎತದ್ಧಿಸರ್ವಶಾಸ್ತ್ರಾಣಾಂಶಾಸ್ತ್ರಮುತ್ತಮಸಂಜ್ಞಿತಂ ।
ಪಂಚರಾತ್ರಮಿತಿಖ್ಯಾತಂನಾರಾಣಮುಖೋದ್ಗತಂ ।
ಅಸ್ಮಾತ್ಪ್ರವಕ್ಷ್ಯತೇಧರ್ಮಾ್ಮನುಸ್ಸ್ವಾಯಂಭುವಸ್ಸ್ವಯಂ ।
ಅನ್ಯೇಷಾಂಧರ್ಮಶಾಸ್ತ್ರಾಣಾಮೇತದ್ರ್ಯನಿರ್ಭವಿಷ್ಯತಿ ॥

ಹೀಗೆ ಪುರಾಣಗಳಗಿಂತಲೂ ಶ್ರೇಷ್ಠವಾದ ಸ್ಮೃತಿಗಳೆಂಬುವ ಧರ್ಮಶಾಸ್ತ್ರಗಳಿಗೆಲ್ಲಾ ಶ್ರೀಪಂಚರಾತ್ರಾಗಮವು ಮೂಲಭೂತವೆಂದು ಹೇಳಿ ಇರುವದ್ದರಿಂದ ಕೆಲವು ಸ್ಥಳಗಳಲ್ಲಿ ಶ್ರೀಪಂಚರಾತ್ರಾಗಮವಿರೋಧವಾಗಿ ತೋರುವ ಪುರಾಣಗಳಿಗೆ ಶ್ರುತಿವಿರುದ್ಧವಾದ ಸ್ಮೃತಿಗಳಂತೆಯೇ ವಿರೋಧಾಧಿಕರಣನ್ಯಾಯಾನುಸಾರವಾಗಿ ಗತಿ ಕಲ್ಪಿಸಬೇಕೇಹೊರ್ತು ಆ ಪುರಾಣವಚನಗಳಿಂದ ಶ್ರೀಪಂಚರಾತ್ರಾಗಮವು ಎಂದಿಗೂ ಬಾಧಿಸಲ್ಪಡಲಾರದು ಮತ್ತು ಶ್ರೀಪಂಚರಾತ್ರಾಗಮವು ವೇದಸಮಾನವೆಂತಲೂ ತ್ರೈವರ್ಣಿಕಾಧಿಕಾರಿಕವೆಂತಲೂ ಶ್ರೀವರಾಹಪುರಾಣದಲ್ಲಿಯೂ ಮಹಾಭಾರತದಂತೆಯೇ ಹೇಳಲ್ಪಟ್ಟಿರುವುದು ಆ ಅಧ್ಯಾಯವನ್ನು ಇಲ್ಲಿ ಸೂಚಿಸುವೆವು

ಶ್ರೀವರಾಹಪುರಾಣೇ

ಭದ್ರಾಶ್ವಉವಾಚ—ಆಶ್ಚರ್ಯಂ ಯದಿತೇ ಕಿಂಚಿದ್ವಿದಿತಂ ದೃಷ್ಟಮೇವಚ
ತನ್ಮೇ ಕಥಯ ಧರ್ಮಜ್ಞ ಪರಂ ಕೌತೂಹಲಂಮಹತ್ ॥
ಅಗಸ್ತ್ಯಉವಾಚ—ಆಶ್ಚರ್ಯರೂಪೋ ಭಗವಾ ನೇಷ ಏವ ಜನಾರ್ದನಃ ।
ತಸ್ಯಾಶ್ಚರ್ಯಾಣಿ ದೃಷ್ಟಾನಿ ಬಹೂನಿ ವಿವಿಧಾನಿವೈ ॥
ಶ್ವೇತದ್ವೀಪಗತಃ ಪೂರ್ವಂ ನಾರದಃ ಕಿಲ ಪಾರ್ಥಿವ ।
ಸೋಪಶ್ಯಚ್ಛಂಖಚಕ್ರಾಂಕಾನ್ ಪುರುಷಾಂಸ್ನಿಗ್ಧತೇಜಸಃ ॥

ಅಯಂ ವಿಷ್ಣು ರಯಂ ವಿಷ್ಣು ರೇಷವಿಷ್ಣು ಸ್ಸನಾತನಃ ।
ಚಿನ್ತಾಭೂತ್ತಸ್ಯ ತಾರ್ಕ್ಷ್ಯಸ್ಯಾಷ್ಟವ ಕೋ ಸ್ಮಿನ್ ವಿಷ್ಣುರಿತಿಪ್ರಭುಃ॥
ಏವಂ ಚಿನ್ತಯತಸ್ತಸ್ಯ ಚಿನ್ತಾಕೃಷ್ಣಂ ಪ್ರತಿ ಪ್ರಭೋ ।
ಆರಾಧಯಾಮಿ ಚ ಕಥಂಶಙ್ಖ ಚಕ್ರಗದಾಧರಂ ॥
ಯೇನ ವೇದ್ಮಿ ಪರಂ ದೇವಂ ಕೃಷ್ಣಂ ನಾರಾಯಣಂ ಪ್ರಭುಂ ।
ಏವಂ ಸಂಚಿನ್ತ್ಯ ದಧ್ಯೌ ಸ ತಂದೇವಂ ಪರಮೇಶ್ವರಂ ॥
ದಿವ್ಯಂ ವರ್ಷಸಹಸ್ರಂತು ಸಾಗ್ರಂ ಬಹ್ಮಸುತಸ್ತದಾ ।
ಧ್ಯಾಯತಸ್ತಸ್ಯ ದೇವ್ಯೋ ಸೌ ಪರಿತೋಷಂಜಗಾಮಹ ॥
ಉವಾಚ ಸ ಪ್ರಸನ್ನಾತ್ಮಾ ಪ್ರತ್ಯಕ್ಷತ್ವಂ ಗತಃ ಪ್ರಭುಃ ।
ವರಂ ಬ್ರಹ್ಮಸುತ ಬ್ರೂಹಿ ಕಿಂತೇ ದದ್ಮಿಮಹಾಮುನೇ ॥

ನಾರದ ಉವಾಚ—ಸಹಸ್ರಮೇಕಂ ವರ್ಷಾಣಾಂ ಧ್ಯಾತಸ್ತ್ವಂ ಭುವನೇಶ್ವರ ।
ತ್ವತ್ಪ್ರಾಪ್ತಿ ರ್ಯೇನತದ್ಬ್ರೂಹಿ ಯದಿತುಷ್ಟೋ ಸಿ ಮೇ ಚ್ಯುತ ॥

ದೇವದೇವ ಉವಾಚ—ಪೌರುಷಂ ಸೂಕ್ತ ಮಾಸ್ಥಾಯ ಯೇಯಜನ್ತಿ ದ್ವಿಜಾ
ಶುಮಾಂ।ತೇ ಮಾಂ ಪ್ರಾಪ್ನುವನ್ತಿ ಸತತಂ ಸಂಹಿತಾಧ್ಯಯನೇನಚ,
ಅಲಾಭೆ ವೇದಮನ್ತ್ರಾಣಾಂ ಪಂಚರಾತ್ರೋದಿತೇನವಾ ।
ಮಾರ್ಗೇಣಮಾಂ ಯಜನ್ತೇ ಯೇತೇಮಾಂಪ್ರಾಪ್ನುವನ್ತಿಮಾನವಾಃ
ಬ್ರಾಹ್ಮಣ ಕ್ಷತ್ರಿಯವಿಶಾಂಪಂಚರಾತ್ರಂ ವಿಧೀಯತೆ ।
ಶೂದ್ರಾದೀನಾಂ ನತಚ್ಛ್ರೋತ್ರ ಪದವೀ ಮಧಿರೋಹತಿ ॥
ಮನ್ತ್ರಾವಾ ವಿಹಿತಂ ತೇಷಾಂ ನಾನ್ಯತ್ಪೂಜಾದಿಕಂ ಚರೇತ್ ।
ಏವಂ ಮಯೋಕ್ತಂ ವಿಪ್ರೇನ್ದ್ರ ಪುರಾಕಲ್ಪೇ ಪುರಾತನಂ ॥
ಪಂಚರಾತ್ರಂಸಹಸ್ರಾಣಾಂ ಯದಿ ಕಶ್ಚಿ ದ್ಗ್ರಹೀಷ್ಯತಿ ।
ಕರ್ಮಕ್ಷಯೇಚಮಾಂ ಕಶ್ಚಿ ದ್ಯದಿಭಕ್ತೋ ಭವಿಷ್ಯತಿ ॥
ತಸ್ಯಚೇದಂಪಂಚರಾತ್ರಂ ನಿತ್ಯಂ ಹೃದಿವಸಿಷ್ಯತಿ ।

ಇತರೇ ರಾಜಸ್ಯೈ ರ್ಭಾವ್ಯೈ ಸ್ತ್ತಾಮಸ್ಯೈ ಶ್ಚ ಸಮಾವೃತಾಃ ||
ಭವಿಷ್ಯನ್ತಿ ದ್ವಿಜಶ್ರೇಷ್ಠ ಮಯ್ಯ್ಯಾಸನ ಪರಾಙ್ಮುಖಾಃ |
ಕೃತಂ ತ್ರೇತಾದ್ವಾಪರಶ್ಚ ಯುಗಾನಿತ್ರೀಣಿನಾರದ ||
ಸತ್ವಸ್ಥಾ ಮಾಂ ಸಮೇಷ್ಯನ್ತಿ ಕಲೌ ರಜಸ್ತಮೋಧಿಕಾಃ |
ಅನ್ಯಚ್ಚ ತೇ ಪ್ರವಕ್ಷ್ಯಾಮಿ ಶೃಣುನಾರದ ಸಾಂಪ್ರತಂ ||
ಯದಿದಂಪಞ್ಚರಾತ್ರಂ ಮೇ ಶಾಸ್ತ್ರಂ ಪರಮದುರ್ಲಭಂ |
ತದ್ಭವಾನ್ ವೇತ್ಸ್ಯತೇ ಸರ್ವಂ ಮತ್ಪ್ರಸಾದಾ ನ್ನಸಂಶಯಃ ||
ವೇದೇನ ಪಂಚರಾತ್ರೇಣ ಭಕ್ತ್ಯಾ ಯಜ್ಞೇನ ಚ ದ್ವಿಜ |
ಪ್ರಾಪ್ಯೋಹಂ ನಾನ್ಯಥಾ ವತ್ಸ ವರ್ಷಕೋಟ್ಯಯುತೈರಪಿ ||
ಏವಮುಕ್ತ್ವಾ ಸ ಭಗವಾ ನ್ನಾರದಂ ಪರಮೇಶ್ವರಃ |
ಜಗಾಮಾದರ್ಶನಂ ಸದ್ಯೋ ನಾರದೋಪಿ ದಿವಂಯಯೌ ||

ಇತಿ ಶ್ರೀವರಾಹಪುರಾಣೇ ಅಗಸ್ತಿ ಗೀತಾಸು ಷಟ್ ಷಷ್ಟಿತಮೋಧ್ಯಾಯಃ.

ಈ ವಚನಗಳಲ್ಲಿ—ಅಲಾಭೆವೇದಮನ್ತ್ರಾಣಾಂ ಪಂಚರಾತ್ರೋದಿತೇನಹಿ |
ಮಾರ್ಗೇಣಮಾಂಯಜನ್ತೇಯೇ ತೇಮಾಂಪ್ರಾಪ್ಸ್ಯನ್ತಿಮಾನವಾಃ |

ಎಂಬುವ ವಚನದಿಂದ ಆರಾಧನಾಂಗವಾದ ವೇದಮನ್ತ್ರಗಳನ್ನು ಹೊಂದುವದಕ್ಕೆ ಅಧಿಕಾರವಿಲ್ಲದ ಅನುಲೋಮಾದಿಗಳು ಪಂಚರಾತ್ರೋಕ್ತವಾದ ಮಾರ್ಗದಿಂದ ಅಂದರೆ ಭಗವದಾರಾಧನಾಂಗಪಂಚರಾತ್ರ ಮನ್ತ್ರಕ್ರಮದಿಂದ ಭಗವದಾರಾಧನೆಯನ್ನು ಮಾಡಿದಲ್ಲಿ ಅವರೂ ಭಗವಂತನನ್ನು ಹೊಂದುವರೆಂದು ಹೇಳಲ್ಪಟ್ಟಿರುತ್ತೆ ಆದ್ದರಿಂದ ಈ ವಚನದಿಂದ ವೇದಾಧಿಕಾರವಿಲ್ಲದವರಿಗೆ ಪಂಚರಾತ್ರಾಧಿಕಾರವೆಂದು ಭ್ರಾಂತಿಪಡಕೂಡದು. ಆದ್ದರಿಂದಲೇ "ಬ್ರಾಹ್ಮಣಕ್ಷತ್ರಿಯವಿಶಾಂ ಪಂಚರಾತ್ರಂವಿಧೀಯತೆ" ಎಂದು ಬ್ರಾಹ್ಮಣಾದಿ ವರ್ಣತ್ರಯಕ್ಕೂ ಪಂಚರಾತ್ರಾಧಿಕಾರವನ್ನು ಹೇಳಿ " ಶೂದ್ರಾದೀನಾಂನತಚ್ಛ್ರೋತ್ರ ಪದವೀಮಧಿರೋಢುಮ್"ಎಂದು ಪಂಚರಾತ್ರಶ್ರವಣದಲ್ಲಿಯೇ ಶೂದ್ರಾದಿಗಳಿಗೆ ಅಧಿಕಾರವಿ

ಲ್ಲವೆಂದು ಸ್ಪಷ್ಟವಾಗಿ ಹೇಳಿರುವದು ಅವಿರುದ್ಧವಾಗುವದು. ಮತ್ತು ಯದಿದ ಮಿತ್ಯಾದಿವಚನದಲ್ಲಿ ಭಗವತ್ಪ್ರಸಾದಬಲದಿಂದಲೇ ನಾರದರಿಗೆ ಪರಮದುರ್ಲಭವಾದ ಪಂಚರಾತ್ರಶಾಸ್ತ್ರವಗತಿಯು ಹೇಳಲ್ಪಟ್ಟಿರುವದು ಯುಕ್ತವಾಗುವದು ಮತ್ತು "ವೇದೇನಪಂಚರಾತ್ರೇಣ—ತ್ಯೈರಪಿ" ಎಂಬುವ ವಚನದಲ್ಲಿ ಚಕಾರದಿಂದ ಸ್ಪಷ್ಟವಾಗಿ ವೇದಕ್ಕೂ ಪಂಚರಾತ್ರಶಾಸ್ತ್ರಕ್ಕೂ ವೇದಪ್ರತಿಪಾದ್ಯವಾದ ಯಜ್ಞಾದಿ ಕರ್ಮಗಳಿಗೂ ಪ್ರಾಧಾನ್ಯೇನ ಪಂಚರಾತ್ರಶಾಸ್ತ್ರ ಪ್ರತಿಪಾದ್ಯವಾದ ಭಕ್ತಿಗೂ ಸಹ ಸಮುಚ್ಚಯವನ್ನು ಹೇಳಿ ವೇದಸಮಾನಾಧಿಕಾರಿಕತ್ವವನ್ನು ಹೇಳಿರುವದು ಸಂಗತವಾಗಿರುವದು

ಇನ್ನೂ ಅನೇಕ ಪ್ರಮಾಣಗಳಿದ್ದಾಗ್ಯೂ ಇಲ್ಲಿ ಉದಾಹರಿಸಲು ಬಹಳ ವಿಸ್ತರವಾಗುವಕಾರಣ ಸಂಕ್ಷೇಪಮಾಡಲ್ಪಟ್ಟಿರುತ್ತೆ.

ಹಾಗಿರುವಲ್ಲಿ " ಒಂದು ವೇಳೆ ಈ ಆಗಮವನ್ನು ಪ್ರಮಾಣವೆಂದು ಒಪ್ಪಿದಾಗ್ಯೂ " ಎಂದು ಹೇಳದೆ ಶ್ರೀಪಾಞ್ಚರಾತ್ರಾಗಮವು ಪ್ರಮಾಣತಮವೆಂದುಒಪ್ಪಲೇಬೇಕು ಎಂದು ಇವರು ಹೇಳಬೇಕು

ಈರೀತಿಯಾಗಿ ಪಂಚರಾತ್ರಾಗಮವು ಬ್ರಾಹ್ಮಣರಿಗೆ ಮುಖ್ಯಪ್ರಮಾಣವಲ್ಲವೆಂಬುವ ಇವರ ಪ್ರಥಮೋದ್ದೇಶ್ಯವು ಸಿದ್ಧಿಸಲಾರದೆಂದು ಸ್ಥಾಪಿಸಲ್ಪಟ್ಟಿತು. ಇನ್ನುಮೇಲೆ " ಪಂಚರಾತ್ರಾಗಮವನ್ನು ಪ್ರಮಾಣವೆಂದು ಒಪ್ಪಿದಾಗ್ಯೂ ಇವರು ಉದಾಹರಿಸಿರುವ ವಚನಗಳು ಇವರ ಉದ್ದೇಶ್ಯಕ್ಕೆ ಸಾಧಕವಲ್ಲವು. " ಎಂಬ ಇವರ ಎರಡನೇ ಉದ್ದೇಶ್ಯವು ಸಿದ್ಧಿಸಲಾರದು ಎಂದು ನಿರೂಪಿಸಲ್ಪಡುವದು ಹ್ಯಾಗಂದರೆ—

[ಯದ್ಬಿಂಬಂಯೇನತಂತ್ರೇಣ ಸಮಾರಬ್ಧಂಪುರಾದಿತಃ ।
ಪ್ರಾಸಾದಂವಾತತಸ್ತೇನ ತಂತ್ರೇಣೈವತದರ್ಚಯೇತ್ ॥
ಯತ್ಪಂಚರಾತ್ರವಿಧಿನಾ ಸ್ಥಾಪ್ಯಸಂಪೂಜಿತಂಪುರಾ ।
ತೇನೈವಪೂಜನೀಯಂತಚ್ಛ ಶ್ವತ್ಪಾಚ್ಛಿದ್ಧಿತಾರ್ಥಿಭಿಃ ॥

ಎಂದು ಮೊದಲುಮಾಡಿ,

ತಂತ್ರಸಂಕರದೋಷಸ್ತು ವಿಶೇಷಾದ್ರಾಜರಾಷ್ಟ್ರಯೋಃ ।
ದೋಷಾಯೈವಭವೇದ್ವಿಪ್ರ ಸರ್ವದಾಕುತ್ರಚಿತ್ಕ್ವಚಿತ್ ॥
ತಸ್ಮಾನ್ನಸಂಕರಃಕಾರ್ಯ ಸ್ತಂತ್ರಾಣಾಂಹಿತಮಿಚ್ಛತಾ ।

ಇತ್ಯಾದಿ ವಚನಗಳಿಂದ ಯಾವದೇವತಾ ಪ್ರತಿಮೆಯನ್ನ ಯಾವತಂತ್ರದಿಂದ ಸ್ಥಾಪನೆ ಮಾಡಿರೋಣವಾಗಿಧೆಯೋ ಆ ಪ್ರತಿಮೆಯನ್ನ ಅದೇ ತಂತ್ರಮಾರ್ಗದಿಂದಲೇ ಪೂಜಿಸಬೇಕೇಹೊರ್ತು ಇತರ ತಂತ್ರಮಾರ್ಗದಿಂದ ಪೂಜೆಮಾಡಿದರೆ ತಂತ್ರಸಾಂಕರ್ಯವಾಗುವದೆಂದುನ್ನೂ ಅಂಥಾ ತಂತ್ರಸಾಂಕರ್ಯದಿಂದ ದೋಷವುಂಟು. ಆದ್ದರಿಂದ ತಂತ್ರಸಾಂಕರ್ಯಮಾಡಬಾರದೆಂದು ನಿಗಮನ ಮಾಡಿರೋಣವಲ್ಲದೆ ಅದರಮುಂದೆ ವೈಖಾನಸ, ಶೈವ, ಪಾಶುಪತ, ಪಾಂಚರಾತ್ರ ಇವೇ ತಂತ್ರಗಳು ಎಂಬದಾಗಿ ಹೇಳಲ್ಪಟ್ಟಿಧೆ. ಪ್ರಕೃತದಲ್ಲಿ ಶ್ರೀರಂಗನಾಥ ದೇವರು ಪಾಂಚರಾತ್ರಾಗಮದಿಂದ ಪ್ರತಿಷ್ಠೆ ಮಾಡಲ್ಪಟ್ಟದ್ದೂ ಅಲ್ಲ. ಜಗದ್ಗುರು ಶ್ರೀ ಶೃಂಗೇರಿಸ್ವಾಮಿಗಳು ಯಾವ ದೀಕ್ಷಾಬದ್ಧರೂ ಅಲ್ಲವಾದ್ದರಿಂದ ಪ್ರಕೃತದಲ್ಲಿ ನಡೆದಿರುವ ಪೂಜೆ ಯಾವತಂತ್ರೋಕ್ತಪ್ರಕಾರವಾದ್ದೂ ಅಲ್ಲವಾದ್ದರಿಂದ ತಂತ್ರಸಾಂಕರ್ಯವಿಲ್ಲದೆ ಇರೋಣದರಿಂದ ಈ ವಚನಗಳಿಂದ ಏನೂ ಪ್ರಕೃತೋಪಯೋಗವಿಲ್ಲವು ]

ಎಂದು ಬರೆದಿರುತ್ತಾರೆ

ಆದರೆ ನಾವು ಪ್ರೊಸಿಡಿಂಗ್ಸಿನಲ್ಲಿ ಉದಾಹರಿಸಿರುವ ವಚನಗಳನ್ನು ಇವರು ತಮ್ಮ ಪ್ರೊಸಿಡಿಂಗ್ಸಿನಲ್ಲಿ ಉದಾಹರಿಸುವಾಗ ಚನ್ನಾಗಿ ಅವುಗಳ ಅರ್ಥಪರ್ಯಾಲೋಚನೆಯನ್ನು ಮಾಡದೆ ಕಶ್ಚಿತ್ತಾಕ್ಯಂತಾಕ್ಷೇಪದಂತೆ ಒಂದೆರಡು ಪದಗಳಿಗೆ ಮಾತ್ರ ಅರ್ಥವನ್ನು ಮಾಡಿಕೊಂಡು ಈರೀತಿಯಾಗಿ ಬರದಿರುವದೇ ವಿನಾ ಬೇರೆಯಿಲ್ಲವು. ಹ್ಯಾಗಂದರೆ—

ಉದಾಹೃತನಾರದೀಯ ಸಂಹಿತಾವಚನಗಳಲ್ಲಿ ಉಪಕ್ರಮದಲ್ಲಿ

" ಯದ್ಬಿಂಬಂಯೇನತಂತ್ರೇಣ ಸಮಾರಬ್ಧಂಪುರಾವಿತಃ |
ಪ್ರಾಸಾದಂವಾತತಸ್ತೇನ ತಂತ್ರೇಣೈವತದರ್ಚಯೇತ್ ||
ಯೋಯಜೇದನ್ಯಮಾರ್ಗೇಣ ಸನಾಶಂಕರ್ತುಮರ್ಹತಿ || "

ಎಂಬುವದರಿಂದ ಯಾವಸ್ಥಲದಲ್ಲಿ ಯಾವ ತಂತ್ರವನ್ನು ಅನುಸರಿಸಿ ಪೂಜೆ ನಡೆಯುತ್ತಲಿರುವದೋ ಆಸ್ಥಳದಲ್ಲಿ ಅದೇ ತಂತ್ರದಿಂದಲೇ ಪೂಜೆ ನಡಿಸಬೇಕು. ಮಾರ್ಗಾಂತರಿಂದ ಪೂಜೆ ಮಾಡಕೂಡದು ಎಂಬು ಹೇಳಲ್ಪಟ್ಟಿರುವದು ಅಲ್ಲಿ ' ಯೋಯಜೇದನ್ಯತಂತ್ರೇಣ ' ಎಂದು ಹೇಳದೇ ಸಾಮಾನ್ಯವಾಗಿ " ಅನ್ಯಮಾರ್ಗೇಣ " ಎಂದು ಇರುವದರಿಂದ ಏಕತಂತ್ರಾನುಸಾರಿ ದೇವಾಲಯದಲ್ಲಿ ತದನ್ಯವಾದ ಯಾವಮಾರ್ಗದಿಂದಲೇಆಗಲಿ ಪೂಜೆ ನಡಿಸಕೂಡದು ಎಂದರ್ಥವು ಸ್ಪಷ್ಟವಾಗಿರುವದು ಅನಂತರ ತಂತ್ರಸಂಕರ ದೋಷವು ಕೂಡದು ಎಂದುಹೇಳಿ ಪ್ರಶ್ನಪೂರ್ವಕವಾಗಿ ವೈಖಾನಸ, ಶೈವ, ಪಾಶುಪತ, ಪಂಚರಾತ್ರವೆಂಬ ನಾಲ್ಕು ತಂತ್ರಗಳನ್ನು ಪ್ರದರ್ಶನಮಾಡಿ

" ಪೂಜಾಯಾಂವರ್ತಮಾನಾಯಾಂ ಪಂಚರಾತ್ರೋದಿತಾಧ್ವನಾ |
ವೈಖಾನಸಾಧ್ವನಾಪಶ್ಚಾತ್ ಪೂಜಿತೆಸ್ಮಿನ್ಪ್ರಮಾದತಃ ||
ಪ್ರತಿಷ್ಠೋಕ್ತೇನವಿಧಿನಾ ಸಂಸ್ಥಾಪ್ಯಮುನಿಪುಂಗವ |
ಅಧಿವಾಸ್ಯಯಥಾನ್ಯಾಯಂ ತಸ್ಮಾದ್ದೋಷಾತ್ಪ್ರಮುಚ್ಯತೆ || "

ಎಂಬುವದರಿಂದ ಪಂಚರಾತ್ರಾನುಸಾರಿಸ್ಥಲದಲ್ಲಿ ಪಂಚರಾತ್ರಸನ್ನಿಹಿತವಾದ ವೈಖಾನಸರೀತ್ಯಾ ಪೂಜೆ ನಡೆಸಿದರೆ ಪ್ರಾಯಶ್ಚಿತ್ತವನ್ನು ಹೇಳಿ, ಅನಂತರ

" ಶೈವೇನಪೂಜಿತೇಪಶ್ಚಾತ್ತಥಾಪಾಶುಪತೇನವಾ |
ವಿಧ್ಯಂತರೇಣವಾವಿಪ್ರ ಪಂಚರಾತ್ರೇತರೇಣವಾ ||
ಪುನಃಪ್ರತಿಷ್ಠಾಂಕೃತ್ವಾತು ಕುರ್ಯಾತ್ಸ್ನಪನಮುತ್ತಮಂ |
ಏವಂಕೃತೇತುಶಾಂತಿಸ್ಸ್ಯಾದನ್ಯಥಾದೋಷಭಾಗ್ಭವೇತ್ ||

ಎಂದು ಪಂಚರಾತ್ರಸ್ಥಳದಲ್ಲಿಯೇ ಶೈವತಂತ್ರದಿಂದಲೇ ಆಗಲಿ, ಪಾಶುಪತತಂ

ತ್ರದಿಂದಲೇ ಆಗಲಿ, ಶೈವಪಾಶುಪತಾತಿರಿಕ್ತವಾದ ಪಂಚರಾತ್ರಾತಿರಿಕ್ತವಾದ ಇತರ ಯಾವವಿಧಿಯಿಂದಲೇ ಆಗಲಿ, ಪೂಜೆಮಾಡಿದರೆ ಗುರುತರವಾದ ಪ್ರಾಯಶ್ಚಿತ್ತವು ಹೇಳಲ್ಪಟ್ಟಿರುವದು

ಅನಂತರ— "ಯತ್ಪಂಚರಾತ್ರವಿಧಿನಾ ಸ್ಥಾಪ್ಯಸಂಪೂಜಿತಂಪುರಾ।
ತೇನೈವಪೂಜನೀಯಂತಚ್ಛಶ್ವತ್ಪಶ್ಚಾದ್ಧಿತಾರ್ಥಿಭಿಃ ॥
ಪೂಜ್ಯೋಭಾಗವತ್ಮೈರೇವ ಪ್ರಾಸಾದೇಸ್ಥಾಪಿತೋಹರಿಃ।
ಪಂಚರಾತ್ರೋಕ್ತಮಾರ್ಗೇಣ ರಾಜರಾಷ್ಟ್ರವಿವೃದ್ಧಯೆ ॥"

ಎಂದು ಪಂಚರಾತ್ರಾನುಸಾರಿಸ್ಥಲದಲ್ಲಿ ಪಂಚರಾತ್ರತಂತ್ರದಿಂದಲೇ ಪೂಜೆಯನ್ನು ನಡಿಸಬೇಕೆಂದು ನಿಗಮನಮಾಡಲ್ಪಟ್ಟಿರುವದು. ಈರೀತಿಯಾಗಿ 'ಈ ನಾರದೀಯಸಂಹಿತಾ' ವಚನಗಳಲ್ಲಿ ಉಪಕ್ರಮದಲ್ಲಿಯೂ, ಉಪಸಂಹಾರದಲ್ಲಿಯೂ, ಮಧ್ಯದಲ್ಲಿಯೂ, ಪಂಚರಾತ್ರಾನುಸಾರಿಯಾಗಿ ಪೂಜೆ ನಡೆಯುತ್ತಿರುವಸ್ಥಲದಲ್ಲಿ ಇತರ ತಂತ್ರಮಾರ್ಗದಿಂದ ಪೂಜೆ ನಡಿಸಕೂಡದೆಂದು ಮಾತ್ರ ಹೇಳದೆ ಪಂಚರಾತ್ರೇತರವಾದ ಯಾವವಿಧಿಯಿಂದಲೂ ಪೂಜೆನಡಿಸಕೂಡದೆಂದು ಸ್ಫುಟವಾಗಿರುವದು

ಶ್ರೀ ಶೃಂಗೇರೀಸ್ವಾಮಿಗಳವರು ನಡಿಸಿರುವ ಪೂಜೆ ಯಾವದೋ ಒಂದು ವಿಧಿಯನ್ನು ಅನುಸರಿಸಿರುವದೇ ವಿನಾ ಅಪ್ಲಾರಕಾರ್ಯದಂತೆ ಅವಿಧಿನಾ ಕೃತವಲ್ಲ. ಹಾಗೆ ಶ್ರೀ ಶೃಂಗೇರೀಸ್ವಾಮಿಗಳವರು ಅವಲಂಬಿಸಿರುವ ವಿಧಿಯು ಪಂಚರಾತ್ರವಿಧ್ಯತಿರಿಕ್ತವೆಂದು ಇವರೇ ಸ್ಪಷ್ಟಪಡಿಸಿರುವರು. ಆದ್ದರಿಂದ ಅದು "ಯೋಯಜೇದನ್ಯಮಾರ್ಗೇಣ"

ವಿಧ್ಯಂತರೇಣವಾವಿಪ್ರ ಪಂಚರಾತ್ರೇತರೇಣವಾ।

ಎಂಬುವ ನಿಷೇಧಕ್ಕೆ ವಿಷಯವಾಗುವದರಲ್ಲಿ ಸಂದೇಹವಿಲ್ಲವೆಂಬುವದು ಸಾಧಾರಣವ್ಯುತ್ಪನ್ನರಾದವರಿಗೂ ವಿದಿತವಾಗುವದು. ಹೀಗಿರುವಲ್ಲಿ [ ಶ್ರೀ ಶೃಂಗೇರೀಸ್ವಾಮಿಗಳು ಯಾವ ದೀಕ್ಷಾಬದ್ಧರೂ ಅಲ್ಲ. ಆದ್ದರಿಂದ ಪ್ರಕೃ

ತದಲ್ಲಿ ನಡದಿರುವ ಪೂಜೆ ಯಾವ ತಂತ್ರೋಕ್ತವಾದ ಪೂಜೆಯೂ ಅಲ್ಲವಾದ್ದರಿಂದ ತಂತ್ರಸಾಂಕರ್ಯವಿಲ್ಲದೇ ಇರೋಣದರಿಂದ ಈ ವಚನಗಳಿಂದ ಏನೂ ಪ್ರಕೃತೋಪಯೋಗವಿಲ್ಲವು " ಎಂದು ಬರದಿರುವದು ಇವರ ಅಪೂರ್ವಪಾಂಡಿತ್ಯಮಹಿಮೆಯೇ ಸರಿ. ಶ್ರೀ ಶೃಂಗೇರಿಸ್ವಾಮಿಗಳು ದೀಕ್ಷಾಬದ್ಧರೆಂದು ಹೇಳಿದವರ್ಯಾರು ? ಅವರುಮಾಡಿದ ಪೂಜೆ ತಂತ್ರೋಕ್ತವಾದ್ದೆಂದು ಯಾರುಹೇಳುವರು ಶ್ರೀ ಶೃಂಗೇರಿಸ್ವಾಮಿಗಳು ಪಂಚರಾತ್ರದೀಕ್ಷೆ ಇಲ್ಲದವರೆಂತಲೂ, ಅವರುಮಾಡಿದ ಪೂಜೆ ಪಾಂಚರಾತ್ರಾತಿರಿಕ್ತವಾದ ವೊಂದುಮಾರ್ಗವನ್ನು ಅನುಸರಿಸಿರುವದೆಂತಲೂ, ಆದ್ದರಿಂದಲೆ ನಾರದೀಯಸಂಹಿತೆಯಲ್ಲಿರುವ "ಯೋಯಜೆದನ್ಯಮಾರ್ಗೇಣ" ಎಂಬ ನಿಷೇಧಕ್ಕೆ ವಿಷಯವಾದದ್ದೆಂತಲೂ ಅಲ್ಲವೆ ನಾವುಹೇಳುವದು ಆದ್ದರಿಂದ ಈ ವಚನಗಳನ್ನು ನಾವು ವೊದಲಿನ ಪ್ರೊಸಿಡಿಂಗ್ಸಿನಲ್ಲಿ ಉದಾಹರಿಸಿರುವದು ಪ್ರಕೃತವಿಷಯಕ್ಕೆ ಅತ್ಯಂತೋಪಯುಕ್ತವೆಂದು ತಿಳಿಯಬೇಕು.

ಇಲ್ಲಿ ಪ್ರಾಸಂಗಿಕವಾಗಿ ಮತ್ತೊಂದು ವಿಷಯವನ್ನು ತಿಳಿಯಪಡಿಸುವೆವು. ಏನೆಂದರೆ—"ತಂತ್ರಾಣಿಕಾನಿದೇವರ್ಷೆ" ಎಂಬುವ ಪ್ರಶ್ನೆಗೆ

ವೈಖಾನಸಂಚಶೈವಂಚ ತಂತ್ರಂಪಾಶುಪತಂತಥಾ ।
ಪಂಚರಾತ್ರಂಮಹಾತಂತ್ರಂ ತಂತ್ರಾಣ್ಯೇತಾನಿಸುವ್ರತ ॥

ಎಂಬ ಉತ್ತರವಾಕ್ಯದಲ್ಲಿ ತಂತ್ರಗಳು ವೈಖಾನಸಾದಿ ನಾಲ್ಕುವಿಧಗಳೆಂದು ಯಥಾಶ್ರುತವಾಗಿತೋರುತ್ತದೆ. ಆದರೆ ಶಾಕ್ತತಂತ್ರ ಬುದ್ಧತಂತ್ರಾದಿಗಳಾದ ಇತರಾನೇಕ ತಂತ್ರಗಳು ಇರುವಲ್ಲಿ ನಾಲ್ಕುವಿಧಗಳೇ ತಂತ್ರಗಳೆಂದು ಹೇಳುವದು ಅಸಂಗತವಾಗುವದು ಆದ್ದರಿಂದ ಆ ವಚನಗಳಲ್ಲಿ ತಂತ್ರಪದಕ್ಕೆ ಉತ್ಕೃಷ್ಟತಂತ್ರವೆಂದು ಅರ್ಥವು ಹೇಳಬೇಕು ಮಹಾಭಾರತದಲ್ಲಿ ["ಸಾಂಖ್ಯಂಯೋಗಃಪಂಚರಾತ್ರಂ ವೇದಾಃಪಾಶುಪತಂ ತಥಾ । ]ಆತ್ಮಪ್ರಮಾಣಾನ್ಯೇತಾನಿ ನಹಂತವ್ಯಾನಿಹೇತುಭಿಃ" ಎಂದು

ಪಂಚರಾತ್ರ ಪಾಶುಪತಗಳಿಗೆ ಆತ್ಮಪ್ರಮಾಣತ್ವ ಹೇತ್ವಹಂತನ್ಯತ್ವಗಳನ್ನು ಹೇಳಿರುವದರಿಂದಲೂ, ಸೌಖ್ಯಾದಿ ಸಹಪಾಠವಿರುವದರಿಂದಲೂ ಇತರ ಶಾಕ್ತಾದಿ ತಂತ್ರಾಪೇಕ್ಷಯಾ ಉತ್ಕೃಷ್ಟತ್ವವು ಸ್ಫುಟವಾಗಿರುವದು. ಪಂಚರಾತ್ರಕ್ಕೆ ವೈಖಾನಸವು ಸನ್ನಿಹಿತವಾಗಿ ಸಮಾನತಂತ್ರವಾಗಿರುವದರಿಂದಲೂ, ಪಾಶುಪತಕ್ಕೆ ಶೈವಾಗಮವು ಸನ್ನಿಹಿತವಾಗಿ ಸಮಾನತಂತ್ರವಾಗಿರುವದರಿಂದಲೂ, ಉತ್ಕೃಷ್ಟತಂತ್ರಗಳು ವೈಖಾನಸಾದಿಭೇದದಿಂದ ನಾಲ್ಕು ವಿಧಗಳೆಂದು ಹೇಳಲ್ಪಟ್ಟಿರುವದು ಉತ್ಕೃಷ್ಟತಂತ್ರ ಸಾಂಕರ್ಯವೇ ನಿಷಿದ್ಧವಾಗಿರುವಲ್ಲಿ ಇತರತಂತ್ರಸಾಂಕರ್ಯವು ನಿಷಿದ್ಧವೆಂಬುವದು ಕೈಮುತ್ಯನ್ಯಾಯಸಿದ್ಧವಾಗಿರುವದು ಮತ್ತು "ಅನ್ಯಮಾರ್ಗೇಣ" "ವಿಧ್ಯಾಂತರೇಣ" ಇತ್ಯಾದಿಗಳಲ್ಲಿ ಇತರತಂತ್ರಮಾರ್ಗವೂ ತಂತ್ರಮಾರ್ಗಾತಿರಿಕ್ತಮಾರ್ಗಸಾಮಾನ್ಯವೂಸಹ ಸ್ಪಷ್ಟವಾಗಿ ನಿಷೇಧಿಸಲ್ಪಟ್ಟಿರುವದು ಇದ್ದರಿಂದ ತಂತ್ರಗಳು ವೈಖಾನಸಾದಿಭೇದದಿಂದ ನಾಲ್ಕೆಂದು ಹೇಳಿರುವದರಿಂದ ಬೇರೇತಂತ್ರಗಳಿಲ್ಲವೆಂದು ಭ್ರಮಿಸಕೂಡದು

ಇನ್ನುಮೇಲೆ ಈ ರಂಗನಾಥಸ್ವಾಮಿಯವರು ಪಂಚರಾತ್ರರೀತ್ಯಾ ಪ್ರತಿಷ್ಠಿತರಲ್ಲವೆಂಬುವವಿಷಯವು ನಿರಾಕರಿಸಲ್ಪಡುವದು ಈ ವಿಷಯವಾಗಿ ಅಸಂಬದ್ಧವಾಗಿ ಇವರು ಬರೆದಿರುವದು ಏನಂದರೆ—"[ಆದರೆ ಈ ರಂಗನಾಥಸ್ವಾಮಿಯವರು ಪಂಚರಾತ್ರಾಗಮೋಕ್ತರೀತ್ಯಾ ಪ್ರತಿಷ್ಠೆ ಮಾಡಲ್ಪಟ್ಟವರೆಂದು ಹೇಳೋಣವೆಂದರೆ — ಇದಕ್ಕೆ ಎಂದಿಗೂ ಅವಕಾಶವಾಗುವದಿಲ್ಲ. ಅದು ಹ್ಯಾಗಂದರೆ, ಈಗ್ಯೆ ಸುಮಾರು ೮—೭ ಶತಮಾನವರ್ಷಗಳಿಂದ ಈಚೆಗೆ ಶ್ರೀ ರಾಮಾನುಜಾಚಾರ್ಯರು ಅವತರಿಸಿ ರಾಮಾನುಜಮತವೆಂಬುವುದನ್ನು ಸ್ಥಾಪನೆಮಾಡಿದರು. ಆಗಮೋಕ್ತವಿಶೇಷ ಯಿಲ್ಲದೆ ಶುದ್ಧ ವೈಷ್ಣವಾದಿಮತಗಳು ಅನಾದಿಯಾಗಿದ್ದು ಅವು ಬೌದ್ಧಾಕ್ರಾನ್ತವಾಗಿದ್ದ ಕಾಲದಲ್ಲಿ ಶ್ರೀಮಚ್ಛಂಕರಭಗವತ್ಪಾದಾಚಾರ್ಯರು ಈಗ್ಯೆ ಎರಡು

ಸಾವಿರವರ್ಷಗಳಮುಂಚೆ ಅವತರಿಸಿ ಬೌದ್ಧಾಚಾರಗಳಂತೆಪ್ಪಿಸಿ ವೇದೋಕ್ತ ಮಾರ್ಗವನ್ನನುಸರಿಸಿ ಆಗಮಗಳನ್ನನುಸರಿಸದೇ ಇರುವ ಶುದ್ಧವೈಷ್ಣವ ಮತವನ್ನೇ ಸ್ಥಾಪನೆಮಾಡಿದ್ದು ಪ್ರಸಿದ್ಧವಾಗಿರಲಾಗಿ ಈಚೆಗೆ ಶ್ರೀ ರಾಮಾನುಜಾರ್ಯರು ಅವತರಿಸಿದನಂತರ ಆಗಮೋಕ್ತತಾನ್ತ್ರಿಕದೀಕ್ಷಾಬದ್ಧರಾದ ವೈಷ್ಣವಮತವೆಂಬುವದು ದಕ್ಷಿಣದೇಶದಲ್ಲಿಮಾತ್ರ ಕೆಲವುಕಡೆ ನೆಲೆಗೊಂಡಿತು ಈ ರಂಗನಾಥಸ್ವಾಮಿಯವರು ಪುರಾಣಪ್ರಸಿದ್ಧರಾದ್ದರಿಂದ ಪುರಾಣಗಳು ಹುಟ್ಟುವ ದ್ವಾಪರಾಂತ್ಯಭಾಗಕ್ಕಿಂತಲೂ ಹಿಂದೆ ಇದ್ದವರೆಂದು ಹೇಳಬೇಕಾದಸಂದರ್ಭದಲ್ಲಿ ಶ್ರೀ ರಾಮಾನುಜಾಚಾರ್ಯರು ಅವತರಿಸುವದಕ್ಕೆ ಮುಂಚೆ ಆಗಮೋಕ್ತದೀಕ್ಷಾರಹಿತರಾದ ಸ್ಮಾರ್ತರಿಂದಲೇ ಪೂಜಿಸಲ್ಪಡುತ್ತಿದ್ದರೆಂದು ಸ್ಪಷ್ಟವಾಗುವದರಲ್ಲಿ ಸಂದೇಹವಿಲ್ಲವು.] " ಎಂದು ಬರೆದಿರುತ್ತಾರೆ ಇದುಸಂಗತವಲ್ಲ

ಯಾಕೆಂದರೆ —ಶ್ರೀಭಗವದ್ರಾಮಾನುಜಾಚಾರ್ಯರು ಅವತರಿಸಿ ಸುಮಾರು ೮೦೦ ವರ್ಷಗಳಿಗಿಂತಲೂ ಅಧಿಕವಾಗಿರುವದು ಅದಕ್ಕೆ ಕೆಲವು ವರ್ಷಗಳಮುಂಚೆ ಶ್ರೀ ಶಂಕರಾಚಾರ್ಯರಕಾಲವು ಒಬ್ಬರಿಗಿಂತ ಒಬ್ಬರು ಸ್ವಲ್ಪಕಾಲಮುಂಚೆ ಇರುವದುಮಾತ್ರವೇ ಮಾಹಾತ್ಮ್ಯಪಾದಕವಲ್ಲವು ಅನ್ಯಥಾ ಬೌದ್ಧನಿಗೆ ಎಲ್ಲಭಾಷ್ಯಕಾರರುಗಳಿಗಿಂತಲೂ ಅಧಿಕವಾದ ಮಾಹಾತ್ಮ್ಯವನ್ನು ಒಪ್ಪಬೇಕಾಗಿಬರುವದು ಶ್ರೀ ಶಂಕರಾಚಾರ್ಯರಿಗಿಂತಲೂ ಪೂರ್ವದಲ್ಲಿಯೇ ಉತ್ತರದೇಶಗಳಲ್ಲಿ ಪ್ರಭಾಕರಭಟ್ಟ ಕುಮಾರಿಲಭಟ್ಟ ಪ್ರಭೃತಿಗಳಿಂದಲೂ ದಕ್ಷಿಣದೇಶದಲ್ಲಿಯೂ ಮತ್ತು ಉತ್ತರದೇಶಗಳಲ್ಲಿ ಶ್ರೀಮನ್ನಾಥಮುನಿ ಪ್ರಭೃತಿಗಳಿಂದಲೂ ಬೌದ್ಧಾದಿಮತಗಳು ನಿರಾಕರಿಸಲ್ಪಟ್ಟಿತ್ತು ಶ್ರೀನಾಥಮುನಿಪ್ರಭೃತಿಗಳಿಂದಲೇ ಶ್ರೀ ಪಂಚರಾತ್ರಾಗಮಪ್ರಾಮಾಣ್ಯಾದಿಗಳು ಪ್ರಕಾಶಮಾಡಲ್ಪಟ್ಟಿತ್ತು ಅನೇಕರು ಪಂಚರಾತ್ರಾಗಮಾನುಸಾರಿಗಳಾಗಿ ದೀಕ್ಷಿತರಾಗಿಯೂ ಇದ್ದರು. ಶ್ರೀ ಶಂಕರಾಚಾರ್ಯರು ನವೀ

ನನಾದ ಮತವನ್ನು ಏರ್ಪಡಿಸಿ ಸೂತ್ರಭಾಷ್ಯವನ್ನು ಮಾಡುವ ಕಾಲದಲ್ಲಿ ಶೈವಾಗಮವೂ ಪಂಚರಾತ್ರಾಗಮವೂಸಹ ಇದ್ದದ್ದಕ್ಕೆ ಅವರ ಭಾಷ್ಯವೇ ಸಾಕಾದ ದೃಷ್ಟಾಂತವಾಗಿರುತ್ತದೆ ಶಂಕರಭಾಷ್ಯದಲ್ಲಿ ೨ ನೇ ಅಧ್ಯಾಯ ೨ನೇ ಪಾದದಲ್ಲಿ ಶೈವಾಗಮಕ್ಕೆ ಅನ್ಯೋನ್ಯಾಶ್ರಯಾದಿ ದೋಷಗಳಿಂದ ಸರ್ವಥಾ ಅಪ್ರಾಮಾಣ್ಯವನ್ನು ಹೇಳಿ ಅನಂತರಾಧಿಕರಣದಲ್ಲಿ ಶ್ರೀ ಪಂಚರಾತ್ರಸಿದ್ಧಾಂತವನ್ನು ಸಂಗ್ರಹವಾಗಿ ನಿರೂಪಿಸಿ ಅದರಲ್ಲಿ ಭಗವನ್ತನಾದ ಶ್ರೀ ವಾಸುದೇವನಿಗೆ ಅವತಾರವಿಶೇಷವಿರುವದನ್ನು ಅಭಿಗಮನಾದಿ ಪಂಚಕಾಲವಿಭಾಗದಿಂದ ಭಗವಂನ್ತನನ್ನು ಪೂಜಿಸುವದನ್ನು ಅಂಥಾ ಪೂಜೆಗೆ ಮೋಕ್ಷಹೇತತ್ವವನ್ನು ಸಹ ಅಂಗೀಕರಿಸುವೆವೆಂದು ಅಭ್ಯುಪಗಮೋಕ್ತಿಯುಹೇಳಲ್ಪಟ್ಟಿರುವದು. ತತ್ವವಿಷಯದಲ್ಲಿಮಾತ್ರ ಆಪಾತತಃ ತೋರುತ್ತಲಿರುವ ಜೀವೋತ್ಪತ್ತಿಯು ವೇದವಿರುದ್ಧವೆಂಬ ದೋಷದಿಂದ ನಿರಾಕರಿಸಲ್ಪಟ್ಟಿದೆ. ಶ್ರೀ ರಾಮಾನುಜಾಚಾರ್ಯರು ಜೀವೋತ್ಪತ್ತಿಯು ಆವಾಕ್ಯಕ್ಕೆ ತಾತ್ಪರ್ಯವಿಷಯವಲ್ಲ, ಆಗಮದಲ್ಲಿಯೇ ಜೀವನಿತ್ಯತ್ವವು ಅನೇಕಸ್ಥಳಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುವದು; ಎಂಬುವದೇಮೊದಲಾದ ಹೇತುಗಳಿಂದಲೂ ಮಹಾಭಾರತಾದಿ ಪ್ರಮಾಣಗಳಿಂದಲೂ ಪಂಚರಾತ್ರವು ವೇದಾವಿರುದ್ಧವೆಂತಲೂ ಪ್ರಮಾಣತಮವೆಂತಲೂ ವೃತ್ತಿಕಾರಬೋಧಾಯನಾದ್ಯನುಸಾರಿಮತ ಸ್ಥಾಪಿಸಿದರು ಆದ್ದರಿಂದಲೇ [ಆಗಮೋಕ್ತದೀಕ್ಷಾರಹಿತ ಶುದ್ಧ ವೈಷ್ಣವಮತವೇ ಅನಾದಿಯಾದದ್ದು. ] ಎಂದು ಬರೆದಿರುವದು ಅಜ್ಞಾನಕಾರ್ಯವೆಂದು ಸ್ಪಷ್ಟವಾಯಿತು.

ಸ್ಮಾರ್ತವೈಷ್ಣವಮತವೇ ಅನಾದಿಯಾದದ್ದೆಂದು ಇವರಿಗೆ ದುರಭಿಪ್ರಾಯವಿರುವಹಾಗೆ ತೋರುತ್ತೆ. ಇದಕ್ಕೆ ಸರಿಯಾದ ಉತ್ತರವನ್ನು ಹೇಳಬೇಕಾದ ಸಂದರ್ಭ ಬಂದಿರುವದರಿಂದ ಅದನ್ನ ಬರಿಯುವೆವು

ವೈಷ್ಣವಮತವು ಅನಾದಿಯಾದದ್ದೆಂಬುವದರಲ್ಲಿ ಸಂದೇಹವಿಲ್ಲವು ಸ್ಮಾರ್ತರೆಂಬ ಹೆಸರಿಂಲೆ ಸ್ಮಾರ್ತಮತವು ಆಧುನಿಕವಾದದ್ದೆಂದು ಸ್ಫುಟ

ವಾಗಿ ತಿಳಿಯಬರುವದು. ಹ್ಯಾಗೆಂದರೆ—

ಲೋಕದಲ್ಲಿ ತಮಗೆ ಮುಖ್ಯವಾದ ಉಪಾಸ್ಯವಸ್ತುವಿನಿಂದೊಡಗೂಡಿದ ಹೆಸರಾಗಲಿ ತಮಗೆ ಮುಖ್ಯಪ್ರಮಾಣವಾದ ವಸ್ತುವಿನಿಂದ ಒಡಗೂಡಿದ ಹೆಸರಾಗಲಿ ಬರುವದು ವಾಡಿಕೆಯಾಗಿರುತ್ತೆ ಉದಾಹರಣೆ ಶೈವರು, ವೈಷ್ಣವರು, ಇತ್ಯಾದಿ ತಾಂತ್ರಿಕರು ವೈದಿಕರು ಇತ್ಯಾದಿ. ವೈಷ್ಣವರಿಗೆ ತಾವು ಸರ್ವೋತ್ತಮತ್ವೇನ ಉಪಾಸಿಸುವ ದೇವತೆಯೊಡಗೂಡಿದ ನಾಮಧೇಯವು ವ್ಯವಹಾರದಲ್ಲಿ ಬಂದಿರುವಹಾಗೆ ಸ್ಮಾರ್ತರು ಉಪಾಸ್ಯದೇವತಾಪದಘಟಿತವಾದ ನಾಮಧೇಯವನ್ನು ಬಿಟ್ಟು ಪ್ರಮಾಣವಾಚಕಪದಘಟಿತವಾದ ನಾಮಧೇಯವನ್ನು ಸ್ವೀಕರಿಸಿದರೆಂದು ಹೇಳಿದಾಗ್ಯೂ ಯಿವರಿಗೆ ವೇದವು ಸರ್ವೋತ್ತಮಪ್ರಮಾಣವೆಂದು ನಿಶ್ಚಯವಿದ್ದು ವೇದವಿರುದ್ಧಾನುಷ್ಠಾನ ಇಲ್ಲದಿರುವ ಪಕ್ಷದಲ್ಲಿ ವೈದಿಕರೆಂಡೆ ಹೆಸರು ಬರಬಹುದಾಗಿ ಇತ್ತು. ಹಾಗಿಲ್ಲದೆ ಸ್ಮಾರ್ತರೆಂದು ಹೆಸರು ಬಂದಿರುವದರಿಂದ ಇವರು ಸ್ಮೃತಿಯನ್ನು ಮುಖ್ಯಪ್ರಮಾಣವೆಂದು ಎಣಿಸಿ ಇರುವರೆಂದು ಗೊತ್ತಾಗುತ್ತೆ. ಹೀಗಿರುವಲ್ಲಿ ಆಗಮೋಕ್ತದೀಕ್ಷಾರಹಿತವಾದ ವೈಷ್ಣವಮತವೇ ಅನಾದಿಯಾದದ್ದೆಂದು ಇವರು ಹೇಳುವದು ತಮ್ಮ ಹೆಸರನ್ನೇ ಪರ್ಯಾಲೋಚಿಸದೆ ಆಡುವ ಮಾತು. ಇದು ಹೀಗಿರಲಿ,

ಅನಾದಿಯಾಗಿ ಪ್ರವರ್ತಿಸಿರುವ ವೇದಾನುಸಾರಿಯಾದ ಶ್ರೀ ಪಂಚರಾತ್ರಸಿದ್ಧಾಂತಮಾರ್ಗವು ಶಂಕರಾಚಾರ್ಯರಿಗಿಂತಲೂ ಮೊದಲೇ ಅವರಿಗಿಂತಲೂ ಕೋಟ್ಯಂಶಾಧಿಕರಾದ ಜ್ಞಾನವೈರಾಗ್ಯಾದಿನಿಧಿಗಳಾದ ಯೋಗಸಮೃದ್ಧಿಯುಳ್ಳವರಾದ ಶ್ರೀಮನ್ನಾಥಮುನಿಪ್ರಭೃತಿಗಳಿಂದ ಬೌದ್ಧಾದಿಗಳನ್ನು ಜಯಿಸಿ ಸ್ಥಿರೀಕರಿಸಲ್ಪಟ್ಟಿತು ಅಂಥಾ ಆಗಮಸಿದ್ಧಾಂತವು ಶಂಕರಾಚಾರ್ಯರಿಂದಲೂ ಅನೇಕಭಾಗಗಳಲ್ಲಿ ಅನುವಾದಿಸಲ್ಪಟ್ಟಿತು. ಇಂಥಾ ಸಿದ್ಧಾಂತವು ಮಹರ್ಷಿಪರಿಗ್ರಹೀತಗಳಾಗಿ ಸಕಲದೇಶವ್ಯಾಪ್ತವಾಗಿ ಆದಿಯಲ್ಲಿದ್ದರೂ ಕಲಿಕಾಲಸ್ವಭಾವದಿಂದ—

ಕಲೌ ಖಲು ಭವಿಷ್ಯನ್ತಿ ನಾರಾಯಣಪರಾಯಣಾಃ ।
ಕ್ವಚಿತ್ಕ್ವಚಿನ್ಮಹಾಭಾಗ ದ್ರವಿಡೇಷುಚ ಭೂರಿಶಃ ॥
ತಾಮ್ರಪರ್ಣೀನದೀಯತ್ರ ಕೃತಮಾಲಾಪಯಸ್ವಿನೀ ।
ಕಾವೇರೀ ಚ ಮಹಾಪುಣ್ಯಾ ಪ್ರತೀಚೀಚಮಹಾನದೀ ।
ಯೇಪಿಬನ್ತಿಜಲಂತಾಸಾಂ ಮನುಜಾಮನುಜೇಶ್ವರ ॥
ಪ್ರಾಯೋಭಕ್ತಾಭಗವತಿ ವಾಸುದೇವೇಮಲಾಶಯಾಃ ।

ಎಂದು ಶ್ರೀಭಾಗವತದ ಏಕಾದಶಸ್ಕಂಧದಲ್ಲಿರುವಂತೆ ದಕ್ಷಿಣದೇಶದಲ್ಲಿ ವಿಶೇಷವಾಗಿ ನೆಲೆಗೊಂಡಿರುವದು ವಾಸ್ತವವೇ. ಶ್ರೀ ರಂಗನಾಥಸ್ವಾಮಿಯವರು ಪುರಾಣಪ್ರಸಿದ್ಧರೆಂತಲೂ, ಪುರಾಣಗಳು ಹುಟ್ಟಿದ ದ್ವಾಪರಾಂತ್ಯಭಾಗಕ್ಕಿಂತಲೂ ಹಿಂದೆ ಇದ್ದವರೆಂತಲೂ, ಇವರು ಹೇಳುವ ಅಂಶದಲ್ಲಿ ಯಾರೂ ಅಸಮಾಧಾನಪಡುವದಕ್ಕೆ ಅವಕಾಶವಿಲ್ಲ ಇವರ ಶಂಕರವಿಜಯವನ್ನೇ ಇವರು ನೋಡದೆ ಶ್ರೀರಾಮಾನುಜಾಚಾರ್ಯರು ಅವತರಿಸುವದಕ್ಕೆ ಮುಂಚೆ ಆಗಮೋಕ್ತದೀಕ್ಷಾರಹಿತರಾದ ಸ್ಮಾರ್ತರಿಂದಲೇ ಪೂಜಿಸಲ್ಪಡುತ್ತಲಿದ್ದರೆಂದು ನಿರ್ಮೂಲವಾಗಿ ಹೇಳುವ ಅಂಶವನ್ನು ಹ್ಯಾಗೆ ನಂಬುವದಕ್ಕೆ ಆದೀತು ? ಈಗಲಾದರೂ ಶ್ರೀಶಂಕರಾಚಾರ್ಯರು ಅವತರಿಸುವದಕ್ಕೆ ಪೂರ್ವದಲ್ಲಿಯೇ ವಿಷ್ಣ್ವಾಗಮನಿಷ್ಠರು ಇದ್ದಹಾಗೆ ಹೇಳುವ ಪ್ರಥಮಸರ್ಗ ೩೫ ನೇ ಶ್ಲೋಕಾದಿಗಳನ್ನು, ಮತ್ತು ಪಂಚರಾತ್ರಾಗಮಾನುಸಾರಿಗಳನ್ನು ಶ್ರೀಶಂಕರಾಚಾರ್ಯರು ಜಯಿಸಿದರೆಂದು ಬರದಿರುವ ೧೫ ನೇ ಸರ್ಗ ೩೫ ನೇ ಶ್ಲೋಕಾದಿಗಳನ್ನೂ ಸಹ ಇವರು ನೋಡಲಿ. ಅದರಲ್ಲಿ ಅವರವರು ತಮ್ಮ ತಮ್ಮ ಮತಪ್ರಶಸ್ತ್ಯವರ್ಣನಕಾಲದಲ್ಲಿ ಹೇಳುವ ಜಯಾದಿ ವಿಷಯವು ಹ್ಯಾಗಾದರೂ ಇರಲಿ ಶ್ರೀಪಂಚರಾತ್ರಾಗಮಾನುಸಾರಿಗಳು ಶಂಕರಾಚಾರ್ಯರಿಗಿಂತಲೂ ಪೂರ್ವದಲ್ಲಿಯೇ ಇದ್ದರೆಂಬ ಅಂಶವು ಉಭಯಸಂಪ್ರತಿಪನ್ನವಾಗಿರುವದು ಹೀಗಿರುವಲ್ಲಿ ಆಗಮೋಕ್ತದೀಕ್ಷಾರಹಿತ ಶ್ರೈಷ್ಣವಮತನೇ ಅನಾದಿಯಿಂ

ತಲೂ, ಅಂಥಾವರಿಂದಲೇ ದೇವರು ರಾಮಾನುಜಾಚಾರ್ಯರ ಅವತಾರಕ್ಕೆ ಮುಂದೆ ಪೂಜಿಸಲ್ಪಡುತ್ತಲಿದ್ದರೆಂದು ಇವರು ಹ್ಯಾಗೆ ಹೇಳಬಹುದು ? [ ಗೌತಮಮಹರ್ಷಿಗಳಿಂದ ಪ್ರತಿಷ್ಠಿತವೆಂತಲೂ, ಅವರಿಂದ ಪೂಜಿಸಲ್ಪಟ್ಟ ವರೆಂತಲೂ ಈ ಸ್ಥಳವು ಪ್ರಸಿದ್ಧವಾಗಿದೆ ] ಎಂದು ಇವರು ಹೇಳುವದು ಸತ್ಯವೇ ಅನಂತರ [ ವೈದಿಕಶಿರೋಮಣಿಗಳಾದ ಬ್ರಹ್ಮರ್ಷಿಗಳಾದ ಗೌತಮರು ಎಂದಿಗೂ ಪಂಚರಾತ್ರಾಗಮರೀತಿಯಿಂದ ಈ ದೇವರನ್ನು ಪ್ರತಿಷ್ಠೆ ಮಾಡಲಿಲ್ಲ ಎಂದು ಮುಂದೆ ಹೇಳಲ್ಪಡುವ ಅಂಶಗಳಿಂದ ಸ್ಪಷ್ಟವಾಗಿ ತಿಳಿಯಬಹುದು ಅದು ಹ್ಯಾಗೆಂದರೆ— ಈ ವೈಷ್ಣವಸಭೆಯವರು ಉದಾಹರಿಸಿರುವ ವಚನಗಳಲ್ಲಿ

ಗೌತಮಃ-" ತಂತ್ರಾಣಿಕಾನಿದೇವರ್ಷೇ ತಾನ್ಯಾಚಕ್ಷ್ವಾದ್ಯಪೃಚ್ಛತಃ।
ತಂತ್ರಾಂತರೈಸ್ತುದೇವೇಶ ಪ್ರಾಯಶ್ಚಿತ್ತಂಚ ಪೂಜತ॥ "

ಎಂದು ನಾರದರನ್ನು ಕುರಿತು ಗೌತಮರ ಪ್ರಶ್ನೆಯಿದೆ. ಇದರಿಂದಲೇ ಗೌತಮರಿಗೆ ಪಂಚರಾತ್ರಾಗಮವು ಗೋಚರವಲ್ಲವೆಂದು ತಿಳಿಯಬರುತ್ತೆ ] ಎಂದಿರುತ್ತೆ ಇದನ್ನೇ ವಿಚಾರಿಸೋಣ ? ಗೌತಮರು ' ತಂತ್ರಾಣಿಕಾನಿ ದೇವರ್ಷೆ ' ಎಂದು ನಾರದರನ್ನು ಕೇಳಿದ ಮಾತ್ರದಿಂದಲೇ ಗೌತಮರಿಗೆ ಪಂಚರಾತ್ರಾಗಮವು ಗೋಚರವಿಲ್ಲವೆಂಬುವದು ಇವರಿಗೆ ಹ್ಯಾಗೆ ಗೋಚರವಾಯಿತು. ಸಾಮಾನ್ಯತಃ ಇದು ಒಂದು ತಂತ್ರವನ್ನೂ ಅರಿಯದವರು ಮಾಡುವಂಥಾ ಪ್ರಶ್ನೆ ಅಲ್ಲ. ಹಾಗಾದರೆ ' ತಂತ್ರಂಕಿಂ ' ಎಂದು ಪ್ರಶ್ನೆ ಇರಬೇಕಾಗಿ ಇರುವದು ' ತಂತ್ರಾಣಿಕಾನಿ ' ಎಂದು ಇರುವದರಿಂದ ತಂತ್ರಗಳು ಎಷ್ಟುವಿಧಗಳೆಂಬ ಪ್ರಶ್ನೆಯ ತಾತ್ಪರ್ಯವು. ಈ ತಾತ್ಪರ್ಯಾನುಸಾರಿಯಾಗಿಯೇ ನಾರದರು ತಂತ್ರಗಳನ್ನು ವೈಖಾನಸ, ಶೈವ, ಪಾಶುಪತ, ಪಂಚರಾತ್ರಗಳೆಂದು ನಾಲ್ಕು ವಿಧಗಳಾಗಿ ವಿಭಜಿಸಿ ಉತ್ತರವನ್ನು ಹೇಳಿರುವರು. ನಾರದೀಯಸಂಹಿತೆಯಲ್ಲಿ ಪ್ರಾಯಶ್ಚಿತ್ತಾಧ್ಯಾಯದಲ್ಲಿ ಈ ವಾಕ್ಯವಿರುವದು. ಇದಕ್ಕೆ

ಪೂರ್ವಾಧ್ಯಾಯಪರ್ಯಂತ ಪಂಚರಾತ್ರವೆಂಬ ಮಹಾತಂತ್ರರೀತ್ಯಾ ಪೂಜಾ ದಿವಿಧಾನವನ್ನು ಉಪದೇಶಿಸಿ ಇರುವರು. ಅನಂತರ ಈ ಪ್ರಾಯಶ್ಚಿತ್ತಾ ಧ್ಯಾಯದಲ್ಲಿ ತಂತ್ರಸಾಂಕರ್ಯವು ದೋಷಾವಹವೆಂದು ಉಪದೇಶಿಸಿದಮೇಲೆ ಹಿಂದೆ ಉಪದೇಶಿಸಲ್ಪಟ್ಟ ಪಂಚರಾತ್ರಾಗಮಕ್ಕಿಂತಲೂ ಅತಿರಿಕ್ತವಾಗಿ ಕೆಲವು ತಂತ್ರಗಳು ಇರುವವೆಂದು ಊಹಿಸಿ ತಂತ್ರಭೇದವನ್ನು ವಿಶಿಷ್ಯ ಅರಿ ಯಬೇಕೆಂಬ ಅಭಿಪ್ರಾಯದಿಂದ ' ತಂತ್ರಾಣಿಕಾನಿದೇವರ್ಷೇ ' ಎಂದು ಗೌತ ಮರು ಪ್ರಶ್ನೆ ಮಾಡಿದರು. ಹೀಗಿರುವಲ್ಲಿ ಗೌತಮರಿಗೆ ಈ ವಾಕ್ಯದಿಂದ ಪಂಚರಾತ್ರಾಗಮವು ಗೋಚರವಲ್ಲವೆಂದು ಹೇಳುವದು ಅಸಂಗತವು

ವಸ್ತುತಃ ಯಾವಪುರಾಣದಲ್ಲಿ ಈ ರಂಗನಾಥಸ್ವಾಮಿಯವರು ಪ್ರಸಿ ದ್ಧರಾಗಿರುವರೋ ಆ ಪುರಾಣದಲ್ಲಿಯೇ ಗೌತಮರು ನಾರದರಿಂದ ಪಂಚರಾ ತ್ರಾಗಮವನ್ನು ಉಪದೇಶಿಸಿಕೊಂಡು ಪಂಚರಾತ್ರಾಗಮರೀತ್ಯಾ ದೇವರನ್ನು ಪೂಜೆಮಾಡಿದರೆಂದು ಸ್ಪಷ್ಟವಾಗಿರುವದು. ಹ್ಯಾಗಂದರೆ—

ಪಶ್ಚಿಮರಂಗಮಹಾತ್ಮ್ಯದಲ್ಲಿ ಪ್ರಥಮಾಧ್ಯಾಯದಲ್ಲಿ ಗೌತಮಗೋಹ ತ್ಯಾಕಥಾಸಂದರ್ಭಾನಂತರದಲ್ಲಿ—

ತತೋಭ್ರಾಂತಮನಾಸ್ತೂರ್ಣಂ ಸ್ನಾತ್ವಾಗೋದಾವರೀಜಲೇ ।
ಗೌತಮಶ್ಚಿಂತಯಾಮಾಸ ಕಥಮೇತದಭೂದಿತಿ ॥
ದದರ್ಶದಿವ್ಯಯಾದೃಷ್ಟ್ಯಾ ಮುನೀನಾಂಕರ್ಮತಾದೃಶಂ ।
ಜಾತಕ್ರೋಧೋಶಪತ್ತಾಂಸ್ತು ಮಿಥ್ಯಾಘಾತಕಶಂಸಿನಃ ॥
ಭವಿಷ್ಯಥತ್ರಯೀಬಾಹ್ಯಾಃ ವಿಷ್ಣುಭಕ್ತಿಪರಾಙ್ಮುಖಾಃ ।
ಪಾಷಂಡಿನೋವಿಕರ್ಮಸ್ಥಾ ಸ್ಸರ್ವವರ್ಣೇಷುಗರ್ಹಿತಾಃ ॥
ನೃಶಂಸಾಃಕ್ರೂರಕರ್ಮಾಣಃ ಶಿವವಿಷ್ಣ್ವೈಕ್ಯತತ್ಪರಾಃ ॥ "

ಎಂದು ಶಿವವಿಷ್ಣುಗಳಿಗೆ ಅಭೇದವನ್ನು ಹೇಳುವ ಸ್ಮಾರ್ತರೇ ಗೌತಮಶಾಪಗ್ರಸ್ತ ರೆಂದು ಹೇಳಲ್ಪಟ್ಟಿರುವದು.

೩ ನೇ ಅಧ್ಯಾಯದಲ್ಲಿ

ಇತಿ ಸಂಪ್ರಾರ್ಥಿತಸ್ತೇನ ರಂಗನಾಥಃ ಕೃಪಾನಿಧಿಃ ।
ಸಾತ್ವತಂ ಪಂಚರಾತ್ರಾಖ್ಯಂ ಮೋಕ್ಷೈಕಫಲದಂನೃಣಾಂ ॥
ಶಾಸ್ತ್ರಂಸ್ವಾರಾಧನಾರ್ಥಾಯ ಬ್ರಹ್ಮಣೆ ಪ್ರದದೌಸ್ವಯಂ ।
ಸತ್ಯಲೋಕಂ ಸಮಾಸಾದ್ಯ ವಿರಜಾದ್ವೀಪಮಾಸ್ಥಿತಃ ।
ಶಾಸ್ತ್ರಂಭಗವತೋಲಬ್ಧ್ವಾ ತದುಕ್ತವಿಧಿನಾಶಿವಮ್ ।
ಸದೇವರ್ಷಿಗಣೈಸ್ಸಾರ್ಧಂ ಬ್ರಹ್ಮಲೋಕಪಿತಾಮಹಃ ॥
ಆರರಾಧ ಜಗನ್ನಾಥಂ ರಂಗನಾಥಮನಾಮಯಂ ।
ಏತಜ್ಜ್ಞಾತ್ವಾ ಮಹಾಪ್ರಾಜ್ಞಃ ಕಪಿಲೋನಾಮನಾಮತಃ ॥
ಸ್ವಾರಾಧನಾರ್ಥಂಶ್ರೀರಂಗಂ ಪ್ರಾರ್ಥಯನ್ನಕರೋತ್ತತಃ ।
ಸತೇನತಪಸಾತುಷ್ಟೋ ರಂಗನಾಥಃ ಕೃಪಾನಿಧಿಃ ॥
ಕಪಿಲಾಯಪ್ರಸನ್ನಾತ್ಮಾ ಬ್ರಹ್ಮಾಣಂಪ್ರತ್ಯುವಾಚಹ ।
ಸಾರ್ಧಕೋಟಿಪ್ರಮಾಣೇನ ಮನ್ಮುಖಾದ್ಭವತಾಶ್ರುತಂ ॥
ಪಂಚರಾತ್ರಂತುಯಚ್ಛಾಸ್ತ್ರಂ ವೇದಮೇಕಾಯನಾಭಿದಂ ।
ತಸ್ಮಿನ್ವೇದೇಪಂಚರಾತ್ರೇ ಗ್ರಂಥಲಕ್ಷಂತುಪದ್ಮಜ ।
ಕಪಿಲಾಯವಿನೀತಾಯ ಪ್ರದದಸ್ವಾರ್ಚನಾಯಮೇ ॥

ಎಂದಿರುವದು.

೪ ನೇ ಅಧ್ಯಾಯದಲ್ಲಿ

ಪೂರ್ವಂಗೋದಾವರೀತೀರಾ ತ್ಪ್ರಸ್ಥಿತೋಮುನಿಸತ್ತಮಃ ।
ಸಂಪ್ರಸ್ಥಿತಸ್ತೀರ್ಥಯಾತ್ರಾಂ ಕುರ್ವಾಣಶ್ಚಿಂತಯನ್ಹರಿಂ ॥

ಎಂದುಪಕ್ರಮಿಸಿ, ಗೌತಮತಪಶ್ಚರ್ಯಾದಿಕಥಾಸಂದರ್ಭಾನಂತರ ಗೌತಮರನ್ನಕುರಿತು ಭಗವದ್ವಾಕ್ಯವು.

ದೃಷ್ಟ್ವೈವಮಾಂಶೇಷಪರ್ಯಂಕೆ ಶ್ರೇಯಃಪರಮವಾಪ್ಸ್ಯಸಿ ।

ಸಾತ್ವತಂಪಂಚರಾತ್ರಾಖ್ಯಂ ಮೋಕ್ಷೈಕಫಲದಂನೃಣಾಂ ||
ಶಾಸ್ತ್ರಂತ್ವೇನಾರದಾಲ್ಲಬ್ಧ್ವಾ ನಿತ್ಯಮಾರಾಧಯಸ್ವಮಾಂ ||

ಎಂದು ಇರುವದು.

ಅನಂತರ ೫ ನೇ ಅಧ್ಯಾಯದಲ್ಲಿ

ತಥಾ ಭಗವತಾಜ್ಞಪ್ತೋ ಗೌತಮೋಹರ್ಷಸಂಯುತಃ |
ಪ್ರಾಪ್ಯತನ್ನಾರದಾಚ್ಛಾಸ್ತ್ರಂ ಪಂಚರಾತ್ರಮನುತ್ತಮಂ |
ದಿವ್ಯಮಂತ್ರಕ್ರಿಯಾಯುಕ್ತಂ ಪುರಾನಾರಾಯಣೇರಿತಂ ||

ಎಂದುಪಕ್ರಮಿಸಿ

ಇತ್ಯುಪಚ್ಛಂದಿತಸ್ತತ್ರ ಗೌತಮುಃಪರಯಾಮುದಾ |
ಶ್ರೀರಂಗನಾಥಂಯಜ್ಞೇಶಂ ದೇವಂನಾರಾಯಣಂಪ್ರಭುಂ ||
ಶತಾನಂದಾದಿಭಿಸ್ಸಾರ್ಧಂ ಭಕ್ತ್ಯಾಚಾರಾಧಯನ್ಮುನಿಃ |
ನಿತ್ಯೋತ್ಸವಾದಿಕಾನ್ಸರ್ವಾನ್ ಕೃತ್ವಾಸಂವತ್ಸರೋತ್ಸವಂ ||
ತತ್ರೈವನ್ಯವಸತ್ಸರ್ವೈಶ್ಚರಿತಾರ್ಥೋಬಭೂವಹ ||

ಎಂದಿರುವದು. ಆದ್ದರಿಂದ ಶ್ರೀ ಪಂಚರಾತ್ರವುವೇದತುಲ್ಯವೆಂತಲೂ, ಅದು ಸಾಕ್ಷಾದ್ಭಗವಂತನಿಂದ ಚತುರ್ಮುಖನಿಗೆ ಉಪದೇಶಿಸಲ್ಪಟ್ಟು ಪರಂಪರೆಯಾಗಿ ನಾರದರಿಂದ ಗೌತಮರಿಗೆ ಉಪಯೋಗಿಸಲ್ಪಟ್ಟನಂತರ ಪಂಚರಾತ್ರಾನುಸಾರವಾಗಿ ಗೌತಮರು ಶ್ರೀ ರಂಗನಾಥದೇವರನ್ನು ಆರಾಧನೆ ಮಾಡಿದರೆಂದು ಸರ್ವರೂ ಒಪ್ಪಿಕೊಳ್ಳಬೇಕು.

ಆದ್ದರಿಂದಲೆ [“ಒಂದು ವೇಳೆ ಗೌತಮರೆ ನಾರದಾದಿಗಳಿಂದ ಪಾಂಚರಾತ್ರಾಗಮವನ್ನು ತಿಳಿದು ಅನಂತರ ದೇವರನ್ನು ಪಾಂಚರಾತ್ರಾಗಮಪದ್ಧತಿಯಿಂದ ಪ್ರತಿಷ್ಠೆಮಾಡಿದಾರೆಂದು ಹೇಳೋಣವೆಂದರೆ ಗೌತಮರಿಗೆ ಸುಳ್ಳಾದ ಗೋಹತ್ಯಾರೂಪವಾದ ಅಪವಾದವನ್ನು ಕಲ್ಪಿಸಿದ ಕೆಲವು ಬ್ರಾಹ್ಮಣರಿಗೆ ಗೌತಮರು ಶಾಪಕೊಟ್ಟಸಂದರ್ಭದಲ್ಲಿ ಪ್ರಮಾಣವಚನವನ್ನುದಹರಿಸುವದ

ರನ್ನು ಸಾವಧಾನವಾಗಿ ನೋಡಲಾಗಿ ಗೌತಮರು ಪಾಂಚರಾತ್ರಾಗಮದಿಂದ ಈ ದೇವರನ್ನು ಪ್ರತಿಷ್ಠೆಮಾಡಿದಾರೆಂತಲೂ ಪಾಂಚರಾತ್ರಾಗಮವು ತದುಕ್ತ ದೀಕ್ಷೆಯು ವೇದೋಕ್ತಮಾರ್ಗನಿಷ್ಠರಾದ ಬ್ರಾಹ್ಮಣರಿಗೆ ಯೋಗ್ಯವೆಂತಲೂ ಹೇಳುವದಕ್ಕೆ ಯಾವಿಗು ಅವಕಾಶವಿರುವದಿಲ್ಲ"] ಎಂದು ಇವರು ಬರದಿರುವದು ಅಸಂಗತವೆಂದು ವ್ಯಾಖ್ಯಾತವಾಯಿತು. ಪ್ರಕೃತ ವಿವಾದವಿಷಯವಾದ ಶ್ರೀ ರಂಗನಾಥಸ್ವಾಮಿಯವರ ದೇವಸ್ಥಾನಕ್ಕೆ ಅಸಾಧಾರಣವಾದ ಮೇಲೆ ಉದಹರಿಸಲ್ಪಟ್ಟ ಪುರಾಣವಚನಗಳೆ ಪ್ರಕೃತ ವಿಷಯದಲ್ಲಿ ಮುಖ್ಯಪ್ರಮಾಣವಾಗಿ ಸ್ವೀಕರಿಸಬೇಕಾಗಿದೆಯಲ್ಲದೆ ಸೂತಸಂಹಿತಾವಚನವು ಈ ವಿಷಯದಲ್ಲಿ ಪ್ರಮಾಣವೆಂದಿಗೂ ಆಗಲಾರದು.

ಇದಲ್ಲದೆ ಶ್ರೀಪಾಂಚರಾತ್ರಾಗಮವು ವೇದತುಲ್ಯವೆಂತಲೂ ಬ್ರಾಹ್ಮಣರಿಗೆ ಮುಖ್ಯಪ್ರಮಾಣವೆಂತಲೂ ಅನೇಕಪುರಾಣಾದಿಗಳಲ್ಲಿರುವದು. ವರಾಹ ಪುರಾಣದಲ್ಲಿ ಈ ವಿಷಯವಾಗಿರುವ ೬೬ನೇ ಅಧ್ಯಾಯವು ಪೂರ್ವದಲ್ಲಿಯೆ ಉದಹರಿಸಲ್ಪಟ್ಟು ಇರುತ್ತೆ. ಅದನ್ನು ನೋಡಬಹುದು ಮತ್ತು ಅದೇ ವರಾಹಪುರಾಣದಲ್ಲಿಯೆ ೫೦ನೆ ಅಧ್ಯಾಯದಲ್ಲಿ—

ವೇದಾಗ್ರ್ಯೇತುಸಮಂದತ್ತಂ ದ್ವಿಗುಣಂತ್ವರ್ಧವಿತ್ತಮೆ ।
ಆಚಾರ್ಯೆ ಪಂಚರಾತ್ರಾಣಾಂಸಹಸ್ರಗುಣಿತಂಭವೇತ್ ॥

ಯೆಂದಿರುವದು. ಮತ್ತು ೭೦ನೆ ಅಧ್ಯಾಯದಲ್ಲಿ

ಸತ್ವೇನಪ್ರೋಜ್ಯತೆವಿಷ್ಣು ಸ್ಸತ್ವಂನಾರಾಯಣಾತ್ಮಕಮ್ ।
ನಾರಾಯಣಶ್ಚಭಗವಾನ್ಯಜ್ಞರೂಪೀವಿಭಾವ್ಯತೆ ॥
ಕೃತೆನಾರಾಯಣಶ್ಶುದ್ಧ ಸ್ಸೂಕ್ಷ್ಮಮೂರ್ತಿರುಪಾಸ್ಯತೆ ।
ತ್ರೇತಾಯಾಂಯಜ್ಞರೂಪೇಣ ಪಂಚರಾತ್ರೆಣದ್ವಾಪರೆ ॥
ಕಲೌಮತ್ಕೃತಮಾರ್ಗೇಣ ಮತ್ಸ್ವರೂಪೇಣತಾಮಸೈಃ ।
ಇಜ್ಯತೆದ್ವೇಷಬುದ್ಧ್ಯೈವಪರಮಾತ್ಮಾಜನಾರ್ದನಃ ॥

ಎಂದಿರುವದು. ವಿಷ್ಣುಪುರಾಣದಲ್ಲಿ ೫ನೇ ಅಂಶದಲ್ಲಿ—

ಯಜ್ಞೈಭಿರ್ಯಜ್ಞಪುರುಷೋವಾಸುದೇವಶ್ಚಸಾತ್ವತೈಃ ।
ವೇದಾಂತವೇದಿಭಿರ್ವಿಷ್ಣುಃ ಪ್ರೋಚ್ಯತೇಯೋನತೋಸ್ಮಿತಂ ॥ಇತಿ॥

ಶ್ರೀಭಾಗವತದಲ್ಲಿ ಪ್ರಥಮಸ್ಕಂಧ ೩ನೆ ಅಧ್ಯಾಯದಲ್ಲಿ—

ತೃತೀಯಮೃಷಿಸರ್ಗಂವೈದೇವರ್ಷಿತ್ವಮುಪೇತ್ಯಸಃ ।
ತಂತ್ರಂಸಾತ್ವತಮಾಚಷ್ಟನೈಷ್ಕರ್ಮ್ಯಂಕರ್ಮಣಾಂಯತಃ ॥

ಎಂದಿರುತ್ತೆ:

ಇದಕ್ಕೆ ಶ್ರೀಧರೀಯವ್ಯಾಖ್ಯಾನದಲ್ಲಿ "ನಾರದಾವತಾರಮಾಹ । ತೃತೀಯಮಿತಿ ॥ ಋಷಿಸರ್ಗಮುಪೇತ್ಯ ತತ್ರಚದೇವರ್ಷಿತ್ವಮುಪೇತ್ಯರ್ಥಃ. ಸಾತ್ವತಂ ವೈಷ್ಣವಂ ತಂತ್ರಂ ಪಂಚರಾತ್ರಾಗಮಂ ಆಚಷ್ಟಉಕ್ತವಾನ್ ಅತಸ್ತಂತ್ರಾತ್ ನಿರ್ಗತಂ ಕರ್ಮಕರ್ಮತ್ವಂ ಬಂಧಹೇತುತ್ವಂ ಎಭ್ಯಸ್ತಾನಿ ನಿಷ್ಕರ್ಮಾಣಿತೇಷಾಂಭಾವೋನೈಷ್ಕರ್ಮ್ಯಂ ಕರ್ಮಣಾಂ ಮೋಚಕತ್ವಂ ಯತೋಭವತಿತದಾಚಷ್ಟೇತ್ಯರ್ಥಃ" ಎಂದಿರುತ್ತೆ.

ಶ್ರೀಭಾಗವತ ೧೧ ಸ್ಕಂಧದಲ್ಲಿ ೩ನೆ ಅಧ್ಯಾಯದಲ್ಲಿ—

ಯಆಶುಹೃದಯಗ್ರಂಥಿಂನಿರ್ಜಿಹೀರ್ಷುಃಪರಾತ್ಮನಃ ।
ವಿಧಿನೋಪಚರೇದ್ದೇವಂ ತಂತ್ರೋಕ್ತೇನಚಕೇಶವಂ ॥
ಲಬ್ಧಾನುಗ್ರಹಆಚಾರ್ಯಾತ್ತೇನಸಂದರ್ಶಿತಾಗಮಃ ।
ಮಹಾಪುರುಷಮಭ್ಯರ್ಚೇ ನ್ಮೂರ್ತ್ಯಾಭಿಮತಯಾತ್ಮನಃ ॥ ಇತಿ

ಇದಕ್ಕೆ ಶ್ರೀಧರೀಯವ್ಯಾಖ್ಯಾನದಲ್ಲಿ "ವೈದಿಕಂಕರ್ಮಯೋಗಮುಕ್ತ್ವಾತಾಂತ್ರಿಕಮಾಹ—ಪರಾತ್ಮನಃ ಪರಸ್ಯೈವ ಸತ ಆತ್ಮನಃ ಜೀವಸ್ಯ ಹೃದಯಗ್ರಂಥಿಂ ಅಹಂಕಾರಬಂಧಂ ನಿರ್ಹರ್ತುಮಿಚ್ಛುಃ ಸಃ ತಂತ್ರೋಕ್ತೇನ ವಿಧಿನಾಪ್ರಕಾರೇಣ ಭಜೇತ್. ತಂತ್ರಂ ಆಗಮಃ. ಚಕಾರಾದ್ವೈದಿಕೇನ ಸಹಸಮುಚ್ಚಯಮಾಹ ॥ ತಮೇವ ವಿಧಿ ಮಾಹ ಲಬ್ಧಾನುಗ್ರಹಇತಿ. ತೇನ ಆಚಾರ್ಯೇಣಸಂದರ್ಶಿತಃ ಆಗ

ಮಃ ಆಗಮೋಕ್ತೇನಪ್ರಕಾರೇಣ ಅರ್ಚನಾಪ್ರಕಾರೋಯಸ್ಯಸಃ" ಎಂದಿರುತ್ತೆ.

ಭಾಗವತೇ ೧೧ನೆ ಸ್ಕಂಧ ೫ನೆ ಅಧ್ಯಾಯದಲ್ಲಿ—

ದ್ವಾಪರೇ ಭಗವಾನ್‌ಶ್ಯಾಮಃ ಪೀತವಾಸಾನಿಜಾಯುಧಃ ।
ಶ್ರೀವತ್ಸಾದಿಭಿರಂಕೈಶ್ಚ ಲಕ್ಷಣೈರುಪಲಕ್ಷಿತಃ ॥
ತಂ ತದಾ ಪುರುಷಂ ಮರ್ತ್ಯಾ ಮಹಾರಾಜೋಪಲಕ್ಷಣಂ ।
ಯಜಂತಿವೇದತನ್ತ್ರಾಭ್ಯಾಂ ಪರಂ ಜಿಜ್ಞಾಸವೋ ನೃಪ ॥ ಇತಿ

ಇದಕ್ಕೆ ಶ್ರೀಧರೀಯವ್ಯಾಖ್ಯಾನದಲ್ಲಿ "ಶ್ಯಾಮಃ ಅತಸೀಪುಷ್ಪಸಂಕಾಶಃ ನಿಜಾನಿ ಚಕ್ರಾದೀನ್ಯಾಯುಧಾನಿ ಯಸ್ಯಸಃ— ಶ್ರೀವತ್ಸೋನಾಮ ವಕ್ಷಸೋ ದಕ್ಷಿಣೇಭಾಗೇ ರೋಮ್ಣಾಂಪ್ರದಕ್ಷಿಣಾವರ್ತಃ, ಸ ಆದಿರ್ಯೇಷಾಂ ಕರಚರಣಾದಿಗತ ಪದ್ಮಾದೀನಾಂ, ತೈರಂಕೈ ಶ್ಚಿಹ್ನೈರ್ಲಕ್ಷಣೈಃ ಬಾಹ್ಯೈಃ ಕೌಸ್ತುಭಾದಿಭಿಃ ತಮಿತಿ ಮಹಾರಾಜೋಪಲಕ್ಷಣಂ ಛತ್ರ ಚಾಮರಾದಿಯುಕ್ತಂ ವೇದತಂತ್ರಾಭ್ಯಾಂ ವೈದಿಕೇನಾಗಮೇನಚ ಮಾರ್ಗೇಣಯಜನ್ತಿ ಪೂಜಯನ್ತಿ ಪರಮೀಶ್ವರಂ ಜ್ಞಾತುಮಿಚ್ಛವಃ" ಎಂದಿರುತ್ತೆ.

ಬ್ರಹ್ಮಾಂಡಪುರಾಣೇ—

ಋಗಾದ್ಯಾ ಭಾರತಂಚೈವ ಪಂಚರಾತ್ರ ಮಥಾಖಿಲಂ ।
ಮೂಲರಾಮಾಯಣಂಚೈವ ಪುರಾಣಂ ಚೈತದಾತ್ಮಕಂ ।
ಯೇಚಾ ನುಯಾಯಿನ ಸ್ತೇಷಾಂ ಸರ್ವೇ ತೇಚ ಸದಾಗಮಾಃ ।
ದುರಾಗಮಾ ಸ್ತದನ್ಯೇ ಯೇ ನತೈ ರ್ಜ್ಞೇಯೋ ಜನಾರ್ದನಃ ॥

ಎಂದು ಶ್ರೀಮನ್ಮಧ್ವಾಚಾರ್ಯರು ಸೂತ್ರಭಾಷ್ಯಾದಿಗಳಲ್ಲಿ ಉದಹರಿಸಿರುವರು.

ಕೌರ್ಮ್ಮೇ ೧೧ನೇ ಅಧ್ಯಾಯದಲ್ಲಿ (ವೇದಾಂತವಿಜಯೇ)

ವೇದೇನ ಪಂಚರಾತ್ರೇಣ ಭಕ್ತ್ಯಾಯಜ್ಞೇನಚ ದ್ವಿಜ ।

ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯೋ ವರ್ಷಲಕ್ಷಶತೈರಪಿ ॥
ಪಞ್ಚರಾತ್ರಂ ಸಹಸ್ರಾಣಾಂ ಯದಿಕಶ್ಚಿದ್ಗ್ರಹೀಷ್ಯತಿ ।
ಕರ್ಮಕ್ಷಯೇಚಮದ್ಭಕ್ತೋ ಯದಿ ಕಶ್ಚಿ ದ್ಭವಿಷ್ಯತಿ ॥
ತಸ್ಯವೇದಾಃ ಪಞ್ಚರಾತ್ರಂ ನಿತ್ಯಂ ಹೃದಿ ವಸಿಷ್ಯತಿ । ಇತಿ

ಸ್ಕಾಂದೇ ವೈಶಾಖಮಾಹಾತ್ಮ್ಯೇ ೧೯ನೇ ಅಧ್ಯಾಯೇ ವ್ಯಾಧಂಪ್ರತಿಶಂಖಃ.

ಶಾಸ್ತ್ರಂಚ ವೇದಾಸ್ಸ್ಮೃತಯಃ ಪುರಾಣಂಚ ತದಾತ್ಮಕಂ ।
ಇತಿಹಾಸಃ ಪಂಚರಾತ್ರಂ ಭಾರತಂ ಚ ಮಹಾಮತೇ ॥
ಏತೈ ರೇವ ಮಹಾವಿಷ್ಣು ಜ್ಞೇಯೋ ನಾನ್ಯೈಃ ಕಥಂಚನ ।

ಎಂದಿರುತ್ತದೆ.

ಶಾಂತಿಪರ್ವದಲ್ಲಿ—

ಅವಶ್ಯಂ ವೈಷ್ಣವೋ ದೀಕ್ಷಾಂ ಪ್ರವಿಶೇ ತ್ಸರ್ವಯತ್ನತಃ ।
ದೀಕ್ಷಿತಾಯ ವಿಶೇಷೇಣ ಪ್ರಸೀದೇ ನ್ನಾನ್ಯಥಾ ಹರಿಃ ॥
ವಸನ್ತೇ ದೀಕ್ಷಯೇ ದ್ವಿಪ್ರಂ ಗ್ರೀಷ್ಮೇ ರಾಜನ್ಯಮೇವಚ ।
ಶಾರದೇ ಸಮಯೇ ವೈಶ್ಯಂ ಹೇಮನ್ತೇ ಶೂದ್ರಮೇವಚ ॥
ಸ್ತ್ರಿಯಞ್ಚ ವರ್ಷಾಕಾಲೇತು ಪಞ್ಚರಾತ್ರ ವಿಧಾನತಃ ॥

ಎಂದು ಇರುತ್ತೆ. ಶ್ರೀಮದ್ರಾಮಾಯಣದಲ್ಲಿ ಉತ್ತರಕಾಂಡದಲ್ಲಿ—

ಪುರಾಣೈಶ್ಚೈವ ವೇದೈಶ್ಚ ಪಞ್ಚರಾತ್ರೈಸ್ತಥಾಖಿಲೈಃ ।
ಧ್ಯಾಯನ್ತಿ ಯೋಗಿನೋ ನಿತ್ಯಂ ಕ್ರತುಭಿಶ್ಚ ಯಜನ್ತಿತಂ ॥

ಎಂದಿರುತ್ತದೆ. ಪಂಚಮವೇದವೆಂದು ಪ್ರಶಂಸಿಸಲ್ಪಟ್ಟ ವೇದೋಪಬೃಂಹಣ ಪ್ರಧಾನನಾದ ಇತಿಹಾಸೋತ್ತಮವಾದ ಮಹಾಭಾರತದಲ್ಲಿ ಭೀಷ್ಮಪರ್ವದಲ್ಲಿ

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ ।
ಸೇವ್ಯತೇಭ್ಯರ್ಚ್ಯತೇ ಚೈವ ನಿತ್ಯಯುಕ್ತೈ ಸ್ಸ್ವಕರ್ಮಭಿಃ ॥
ಸಾತ್ವತಂ ವಿಧಿ ಮಾಸ್ಥಾಯ ಗೀತಸ್ಸಂಕರ್ಷಣೇನಯಃ ।

ದ್ವಾಪರಸ್ಯ ಯುಗಸ್ಯಾನ್ತೇ ಆದೌ ಕಲಿಯುಗಸ್ಯ ಚ ॥

ಎಂದು ಸಾತ್ತ್ವತವೆನ್ನುವ ಶ್ರೀ ಪಾಂಚರಾತ್ರಶಾಸ್ತ್ರವು ಸಾಕ್ಷಾದ್ಭಗವತ್ಪ್ರೋಕ್ತವೆಂತಲೂ ಆ ಶಾಸ್ತ್ರಾನುಸಾರವಾಗಿ ಶ್ರುತಿಸ್ಮೃತ್ಯಾದ್ಯುಕ್ತಸ್ವಸ್ವಕರ್ಮನಿರತರಾದ ಬ್ರಾಹ್ಮಣಾದಿ ನಾಲ್ಕು ವರ್ಣಗಳಿಂದಲೂ ಭಗವನ್ತನು ಸೇವಿಸಲ್ಪಡುವನೆಂದು ದುರ್ಯೋಧನನನ್ನು ಕುರಿತು ಭೀಷ್ಮಾಚಾರ್ಯರು ಹೇಳಿರುವರು ಅನುಶಾಸನಿಕದಲ್ಲಿ ೧೩೭ ಅಧ್ಯಾಯ-ಶ್ರಾದ್ಧಪಾತ್ರನಿರ್ಣಯ—

ಇಮೇಪರೇ ಮಹಾರಾಜ ವಿಜ್ಞೇಯಾಃ ಪಂಕ್ತಿಪಾವನಾಃ ।
ಯತಯೋ ಮೋಕ್ಷಧರ್ಮಜ್ಞಾ ಯೋಗಿನಶ್ಚರಿತವ್ರತಾಃ ।
ಪಾಂಚರಾತ್ರವಿದೋ ಮುಖ್ಯಾ ಸ್ತಥಾಭಾಗವತಾಃ ಪರೇ ।
ವೈಖಾನಸಾಃಕುಲಶ್ರೇಷ್ಠಾ ವೈದಿಕಾಚಾರನಿಷ್ಠಿತಾಃ ॥ ಇತಿ

ಮೋಕ್ಷಧರ್ಮನಾರಾಯಣೀಯದಲ್ಲಿ (೩೪೮)ನೇ ಅಧ್ಯಾಯದಲ್ಲಿ

ಯದಾಸೀನ್ಮಾನಸಂ ಜನ್ಮ ನಾರಾಯಣಮುಖೋದ್ಗತಂ ।
ಬ್ರಹ್ಮಣಃ ಪೃಥಿವೀಪಾಲ ತದಾನಾರಾಯಣಸ್ಸ್ವಯಂ ॥
ತೇನ ಧರ್ಮೇಣಕೃತವಾನ್ ದೈವಂ ಪಿತ್ರ್ಯಂ ಚ ಭಾರತ ।
ಫೇನಯಾ ಋಷಯಶ್ಚೈವ ತಂ ಧರ್ಮಂ ಪ್ರತಿಪೇದಿರೇ ॥
ವೈಖಾನಸಾಃ ಫೇನಯೇಭ್ಯೋ ಧರ್ಮ ಮೇತಂ ಪ್ರಪೇದಿರೆ ।
ವೈಖಾನಸೇಭ್ಯಃ ಪ್ರಾಪ್ತಸ್ತು ತತ ಸ್ಸೋನ್ತರ್ದಧೇಪುನಃ ।
ಯದಾಸೀ ಚ್ಚಾಕ್ಷುಷಂ ಜನ್ಮ ದ್ವಿತೀಯಂ ಬ್ರಹ್ಮಣೋನೃಪ ॥
ತದಾಪಿತಾಮಹೇನೈವ ಸೋಯಂಧರ್ಮಃ ಪರಿಶ್ರುತಃ ।
ನಾರಾಯಣಾತ್ಮಕೋರಾಜನ್ ರುದ್ರಾಯ ಪ್ರದದೌಚತಂ ।
ತತೋ ಯೋಗಸ್ಥಿತೋರುದ್ರಃ ಪುರಾಕೃತಯುಗೇನೃಪ ॥
ವಾಲಖಿಲ್ಯಾನೃಷೀನ್ ಸರ್ವಾನ್ ಧರ್ಮ ಮೇತದಪಾಠಯತ್ ॥
ಅನ್ತರ್ದಧೇತತೋಭೂಯ ಸ್ತಸ್ಯ ದೇವಸ್ಯ ಮಾಯಯಾ ।

ತೃತೀಯಂ ಬ್ರಹ್ಮಣೋಜನ್ಮ ಯದಾಸೀದ್ವಾ ಚಿಕಂವತ್ತಹತ್ ||
ತತ್ರೈಷ ಧರ್ಮಸ್ಸಮ್ಭೂತಃ ಸ್ವಯಂ ನಾರಾಯಣಾನ್ನೃಪ ||
ಸುಪರ್ಣೋನಾಮತಮೃಷಿಃ ಪ್ರಾಪ್ತವಾನ್ ಪುರುಷೋತ್ತಮಾತ್ |
ತಪಸಾವೈ ಸುತಪ್ತೇನ ದಮೇನ ವಿನಯೇನಚ |
ಸುಪರ್ಣಾನ್ಚಾಪ್ಯ ಪ್ಯಥಿಗತಃ ಧರ್ಮಏಷ ಸನಾತನಃ ||
ವಾಯುನಾ ದ್ವಿಪದಾಂ ಶ್ರೇಷ್ಠ ಕಥಿತೋ ಜಗದಾಯುಷಾ |
ವಾಯೊ ಸ್ಸಕಾಶಾ ತ್ಪ್ರಾಪ್ತಶ್ಚ ಋಷಿಭಿ ರ್ವಿಘಸಾದಿಭಿಃ |
ತತೋಮಹೋದಧಿಶ್ಚೈವ ಪ್ರಾಪ್ತವಾನ್ ಧರ್ಮಮುತ್ತಮಂ ||
ಅನ್ತರ್ದಧೇ ತತೋ ಭೂಯಃ ನಾರಾಯಣಸಮಾಹಿತಃ |
ಯದಾ ಭೂಯ ಶ್ಶ್ರವಣಜಾ ಋಷಿ ರಾಸೀ ನ್ಮಹಾತ್ಮನಃ ||
ಬ್ರಹ್ಮಣಃ ಪುರುಷ ವ್ಯಾಘ್ರ ತತ್ರ ಕೀರ್ತ್ತಯತ ಶ್ಶೃಣು |
ಜಗತ್ಸ್ರಷ್ಟುಮನಾ ದೇವೋ ಹರಿ ರ್ನ್ನಾರಾಯಣಸ್ಸ್ವಯಂ ||

ಎಂದು ಆರಂಭಿಸಿ,

ಧರ್ಮಂ ಚ ಮತ್ತೋ ಗೃಹ್ಣೀಷ್ವ ಸಾತ್ತ್ವತಂ ನಾಮನಾಮತಃ—

ಎಂದು ಬ್ರಹ್ಮದೇವನಿಗೆ ಭಗವದ್ವಚನವನ್ನು ಹೇಳಿ

ಧರ್ಮಂ ಚಾಗ್ರ್ಯಂ ಸಜಗ್ರಾಹ ಸರಹಸ್ಯಂ ಸಸಂಗ್ರಹಂ |
ಆರಣ್ಯಕೇನ ಸಹಿತಂ ನಾರಾಯಣ ಮುಖೋದ್ಗತಂ ||
ತತೋಹಿಸಾತ್ತ್ವತೋ ಧರ್ಮೋ ವ್ಯಾಪ್ಯ ಲೋಕಾನವಸ್ಥಿತಃ |
ತೇನೈವಾದ್ಯೇನ ಧರ್ಮೇಣ ಬ್ರಹ್ಮಾಲೋಕವಿಸರ್ಗಕೃತ್ ||
ಪೂಜಯಾಮಾಸ ದೇವೇಶಂ ಹರಿಂನಾರಾಯಣಂಪ್ರಭುಂ |
ಧರ್ಮಪ್ರತಿಷ್ಠಾಹೇತೋಶ್ಚ ಮನುಂ ಸ್ವಾರೋಚಿಷಂ ತತಃ ||
ಅಧ್ಯಾಪಯಾಮಾಸ ತದಾ ಲೋಕಾನಾಂ ಹಿತಕಾಮ್ಯಯಾ |
ತತಸ್ಸ್ವಾರೋಚಿಷಃ ಪುತ್ರಂ ಸ್ವಯಂ ಶಂಖಪದಂ ತತಃ ||

ಅಧ್ಯಾಪಯತ್ಪುರಾ ವ್ಯಗ್ರಃ ಸರ್ವಲೋಕಪತಿಃ ಪ್ರಭುಃ ।
ತತಶ್ಯಂಖಪದಶ್ಚಾಪಿ ಪುತ್ರ ಮಾತ್ಮಜ ಮೌರಸಂ ।
ದಿಶಾಂ ಪಾಲಂ ಸುವರ್ಣಾಭಂ ಅಧ್ಯಾಪಯತ ಭಾರತ ।
ಸೋಂತರ್ದಧೇ ತತೋಭೂಯಃ ಪ್ರಾಪ್ತೇ ತ್ರೇತಾಯುಗೇಪುನಃ ।
ನಾಸಿಕ್ಯಜನ್ಮನಿ ಪುರಾ ಬ್ರಹ್ಮಣಃ ಪಾರ್ಥಿವೋತ್ತಮ ।
ಧರ್ಮಮೇತಂ ಸ್ವಯಂ ದೇವೋ ಹರಿ ರ್ನಾರಾಯಣಃಪ್ರಭುಃ ।
ತಜ್ಜಗಾದಾರವಿನ್ದಾಕ್ಷೋ ಬ್ರಹ್ಮಣಃ ಪಶ್ಯತಸ್ತದಾ ।
ಸನತ್ಕುಮಾರೋ ಭಗವಾನ್ ತತಃ ಪ್ರಾಧೀತವಾನ್ನೃಪ ।
ಸನತ್ಕುಮಾರಾ ದಪಿಚ ವೀರಣೋ ವೈ ಪ್ರಜಾಪತಿಃ ।
ಕೃತಾದೌ ಕುರುಶಾರ್ದೂಲ ಧರ್ಮಮೇತ ದಧೀತವಾನ್ ।
ವೀರಣಶ್ಚಾಪ್ಯ ಧೀತ್ಯೈನಂ ರೈಭ್ಯಾಯ ಮುನಯೆದದೌ ।
ರೈಭ್ಯಃಪುತ್ರಾಯ ಶುದ್ಧಾಯ ಸುವ್ರತಾಯ ಸುಮೇಧಸೇ ।
ಕುಕ್ಷಿ ನಾಮ್ನೇಪ ಪ್ರದದೌ ದಿಶಾಂ ಪಾಲಾಯ ಧರ್ಮಿಣೇ ।
ತತೋಪ್ಯಂತರ್ದಧೇ ಭೂಯೋ ನಾರಾಯಣಮುಖೋದ್ಭವಃ ।
ಅಣ್ಡಜೇ ಜನ್ಮನಿ ಪುನಃ ಬ್ರಹ್ಮಣೇ ಹರಿಯೋನಯೇ ।
ಏಷಧರ್ಮ ಸ್ಸಮುದ್ಭೂತೋ ನಾರಾಯಣಮುಖಾತ್ಪುನಃ ।
ಗೃಹೀತೋಬ್ರಹ್ಮಣಾ ರಾಜನ್ ಪ್ರಯುಕ್ತಶ್ಚ ಯಥಾವಿಧಿ ।
ಅಧ್ಯಾಪಿತಾಶ್ಚ ಮುನಯೊ ನಾಮ್ನಾಬರ್ಹಿಷದೋನ್ನೃಪ ।
ಬರ್ಹಿಷದ್ಭ್ಯಶ್ಚಸಂಪ್ರಾಪ್ತಃ ಸಾಮವೇದಾನ್ತಗಂದ್ವಿಜಂ ।
ಜ್ಯೇಷ್ಠಂ ನಾಮಾಭಿವಿಖ್ಯಾತಂ ಜ್ಯೇಷ್ಠನಾಮವ್ರತೋಹರಿಃ ।
ಜ್ಯೇಷ್ಠಾಚ್ಚಾಪ್ಯನು ಸಂಪ್ರಾಪ್ತೋ ರಾಜಾನ ಮವಿ ಕಂಪನಂ ।
ಅಂತರ್ದಧೆ ತತೋರಾಜನ್ ಏಷಧರ್ಮಃ ಪ್ರಭೋರ್ಹರೇಃ ।

ಎಂದು ಶ್ರೀಪಾಂಚರಾತ್ರ ಶಾಸ್ತ್ರಕ್ಕೆ ಸಂಭವಿಸಿದ ಆರು ಆವೃತ್ತಿ ಆವಿರ್ಭಾವ

ತಿರೋಭಾವಗಳನ್ನು ಉಪನ್ಯಾಸಮಾಡಿ,

ಯದಿದಂಸಪ್ತಮಂ ಜನ್ಮ ಪದ್ಮಜಂ ಬ್ರಹ್ಮಣೋನೃಪ।
ತತ್ರೈಷ ಧರ್ಮಃ ಕಥಿತಃ ಸ್ವಯಂ ನಾರಾಯಣೇನ ಹ।
ಪಿತಾಮಹಾಯ ಶುದ್ಧಾಯ ಯುಗಾದೌಲೋಕಕಾರಿಣೇ।
ಪಿತಾಮಹಶ್ಚ ದಕ್ಷಾಯ ಧರ್ಮಮೇತಂ ಪುರಾದದೌ।
ತತೋಜ್ಯೇಷ್ಠೇತು ದೌಹಿತ್ರೇ ಪ್ರಾದಾದ್ದಕ್ಷೋನೃಪೋತ್ತಮ।
ಆದಿತ್ಯೇಸವಿತುರ್ಜ್ಯೇಷ್ಠೇ ವಿವಸ್ವಾನ್ ಜಗೃಹೇ ತತಃ।
ತ್ರೇತಾಯುಗಾದೌ ಚ ತತೋ ವಿವಸ್ವಾನ್ ಮನವೇ ದದೌ।
ಇಕ್ಷ್ವಾಕುಣಾ ಚ ಕಥಿತೋ ವ್ಯಾಪ್ಯ ಲೋಕಾನವಸ್ಥಿತಃ।

ಎಂದು ವರ್ತಮಾನ ಪದ್ಮಕಲ್ಪೀಯ ಪ್ರವೃತ್ತಿ ಪರಂಪರೋಪದೇಶದಿಂದ

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ।
ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್।

ಎಂದು ಗೀತೆಯಲ್ಲಿ ಹೇಳಿದಂತೆಯೆ ಪರಂಪರೆಯನ್ನು ಹೇಳಿ

ಯತೀನಾಂ ಚಾಪಿ ಯೋಧರ್ಮಃ ಸತೇಪೂರ್ವಂನೃಪೋತ್ತಮ।
ಕಥಿತೋಹರಿಗೀತಾಸು ಸಮಾಸವಿಧಿಕಲ್ಪಿತಃ।

ಎಂದು ಸ್ಫುಟವಾಗಿ ಹೇಳಲ್ಪಟ್ಟಿರುತ್ತದೆ.

೩೩೬ನೇ ಅಧ್ಯಾಯದಲ್ಲಿ "ರಾಜೋಪರಿಚರೋನಾಮ" ಎಂದಾರಂಭಿಸಿ—

ಸಾತ್ವತಂ ವಿಧಿಮಾಸ್ಥಾಯ ಪ್ರಾಕ್ಸೂರ್ಯಮುಖನಿಸ್ಸೃತಂ।
ಪೂಜಯಾಮಾಸ ದೇವೇಶಂ ಎಂದು ಹೇಳಿ
ಕಾಮ್ಯನೈಮಿತ್ತಿಕಾರಾಜನ್ಯಜ್ಞಿಯಾಃ ಪರಮಕ್ರಿಯಾಃ।
ಸರ್ವಾಸ್ಸಾತ್ವತಮಾಸ್ಥಾಯ ವಿಧಿಂಚಕ್ರೇಸಮಾಹಿತಃ।
ಪಂಚರಾತ್ರವಿದೋಮುಖ್ಯಾಸ್ತಸ್ಯಗೇಹೇಮಹಾತ್ಮನಃ।
ಪ್ರಾಪಣಂಭಗವತ್ಪ್ರೋಕ್ತಂ ಭುಂಜತೇಚಾಗ್ರಭೋಜನಂ। ಎಂದಿರುತ್ತೆ.

ಮತ್ತು ನಾರದಪರಂಪರೆಯಿಂದ ಭೂಲೋಕದಲ್ಲಿ ಪ್ರವೃತ್ತಿಯೂ, ನಾರದರಿಗೆ ಈ ಶ್ರೀಪಂಚರಾತ್ರಶಾಸ್ತ್ರಪಗತಿಯೂ ಶ್ರೀಭಗವಂತನಿಂದಲೇ ಸಾಕ್ಷಾತ್ತಾಗಿ ಬಂದಿರುತ್ತದೆಯೆಂದು ಅಲ್ಲಿಯೇ ಸ್ಪಷ್ಟವಾಗಿ (೩೪೯)ನೇ ಅಧ್ಯಾಯದಲ್ಲಿ

ನಾರದೇನತು ಸಂಪ್ರಾಪ್ತ ಸ್ಸರಹಸ್ಯ ಸ್ಸಸಂಗ್ರಹಃ।

ಎಷಧರ್ಮೋ ಜಗನ್ನಾಥಾತ್ ಸಾಕ್ಷಾನ್ನಾರಾಯಣಾನ್ನೃಪ ।

ಎಂದು ಹೇಳಲ್ಪಟ್ಟಿದೆ ೩೩೯ ಅಧ್ಯಾಯದಲ್ಲಿ

ಪ್ರಾಪ್ಯಶ್ವೇತಂಮಹಾದ್ವೀಪಂ ನಾರದೋ ಭಗವಾನೃಷಿಃ ।

ಇತ್ಯಾದಿನಾ ಶ್ವೇತದ್ವೀಪಕ್ಕೆ ನಾರದರು ಹೋಗಿ ಅಲ್ಲಿ ಶ್ರೀಮನ್ನಾರಾಯಣನನ್ನು ನೋಡದೆ ನಂತರ ಸ್ತೋತ್ರ ಮಾಡುವ ಕಾಲದಲ್ಲಿ ಸಂತುಷ್ಟನಾಗಿ ಭಗವಂತನು ಪ್ರತ್ಯಕ್ಷನಾಗಿ

ಇಮೇ ಹ್ಯಸಿಂದ್ರಿಯಾಹಾರಾ ಮದ್ಭಕ್ತಾಶ್ಚಂದ್ರವರ್ಚಸಃ ।

ಏಕಾಗ್ರಾಶ್ಚಿನ್ತಯೇ ಯು ರ್ಮಾಂ ನೈಷಾಂವಿಘ್ನೋಭವೇದಿತಿ ॥

ಇತ್ಯಾದಿನಾ ವಿಸ್ತಾರವಾಗಿ ನಾರದರಿಗೆ ಪಾಂಚರಾತ್ರಪ್ರಕ್ರಿಯೋಪದೇಶವನ್ನು ಮಾಡಿದ ಹಾಗೆ ಸ್ಪಷ್ಟವಾಗಿರುತ್ತೆ. ಅನನ್ತರ ನಾರದಮುಖದಿಂದ ಪ್ರಚಾರವೂ ಅಲ್ಲಿಯೇ ಹೇಳಲ್ಪಟ್ಟಿರುತ್ತೆ.

ಇದಂಮಹೋಪನಿಷದಂ ಚತುರ್ವೇದಸಮನ್ವಿತಂ ।

ಸಾಂಖ್ಯಯೋಗಕೃತಾನ್ತೇನ ಪಂಚರಾತ್ರಾನುಶಬ್ದಿತಂ ॥

ನಾರಾಯಣಮುಖೋದ್ಗೀತಂ ನಾರದೋ ಶ್ರಾವಯತ್ಪುನಃ ।

ಬ್ರಹ್ಮಣ ಸ್ಸದನೇ ತಾತ ಯಥಾದೃಷ್ಟಂ ಯಥಾಶ್ರುತಂ ।

ಯೇಚಾನ್ಯೇಬ್ರಹ್ಮಸದನೇ ಸಿದ್ಧಸಂಘಾ ಸ್ಸಮಾಗತಾಃ ।

ತೇಷಾಂಸಕಾಶಾ ತೂರ್ಸ್ಯಸ್ತು ಶ್ರುತ್ವಾ ವೈ ಭಾವಿತಾತ್ಮನಾಂ ।

ಆತ್ಮಾನುಗಾಮಿನಾಂ ರಾಜರ್ ಶ್ರಾವಯಾಮಾಸವೈತತಃ ।

ಷಟ್‌ಷಷ್ಟಿರ್ಹಿ ಸಹಸ್ರಾಣಿ ಋಷೀಣಾಂ ಭಾವಿತಾತ್ಮನಾಂ ।

ಸೂರ್ಯಸ್ಯತಪತೋ ಲೋಕಾನ್ ನಿರ್ಮಿತಾಯೆ ಪುರಸ್ಸರಾಃ ।
ತೇಷಾ ಮಕಥಯ ತ್ಪೂರ್ವ ಸ್ಸರ್ವೇಷಾಂ ಭಾವಿತಾತ್ಮನಾಂ ।
ಸೂರ್ಯಾನುಗಾಮಿಭಿ ಸ್ತಾತ ಋಷಿಭಿ ಸ್ತೈರ್ಮಹಾತ್ಮಭಿಃ ।
ಮೇರೋ ಸ್ಸಮಾಗತಾ ದೇವಾ ಶ್ಶ್ರಾವಿತಾಶ್ಚೇದಮುತ್ತಮಾಂ ।
ದೇವಾನಾಂತು ಸಕಾಶಾದ್ವೈ ತತಶ್ಶ್ರುತ್ವಾ ಸಿತೋದ್ವಿಜಃ ।
ಶ್ರಾವಯಾಮಾಸ ರಾಜೇನ್ದ್ರ ಪಿತ್ಣಾಮ್ಮುನಿಸತ್ತಮ ।
ಮಮಚಾಪಿ ಪಿತಾ ತಾತ ಕಥಯಾಮಾಸಶಂತನುಃ ।
ತತೋಮಯಾಪಿಶ್ರುತ್ವಾಚ ಕೀರ್ತಿತಂ ತವಭಾರತ ।
ಸುರೈರ್ವಾಮುನಿಭಿರ್ವಾಪಿ ಪುರಾಣಂ ಯೈರಿದಂಶ್ರುತಂ ।
ಸರ್ವೇ ತೇ ಪರಮಾತ್ಮಾನಂ ಪೂಜಯನ್ತಿಸಮಂತತಃ । ... ..... ..

ವೈಶಂಪಾಯನಃ—

ಶ್ರುತ್ವೇದಮಾಖ್ಯಾನವರಂ ಧರ್ಮರಾಡ್ಜನಮೇಜಯ ।
ಭ್ರಾತರಶ್ಚಾಸ್ಯತೇಸರ್ವೇ ನಾರಾಯಣಪರಾಭವನ್ । .... .........

ಸೂತಃ—

ಏತತ್ತೇ ಸರ್ವ ಮಾಖ್ಯಾತಂ ವೈಶಂಪಾಯನಕೀರ್ತಿತಂ ।
ಜನಮೇಜಯೇನ ಯಚ್ಛ್ರುತ್ವಾ ಕೃತಂ ಸಮ್ಯಗ್ಯಥಾವಿಧಿ ।
ಯೂಯಂಹಿ ತಪ್ತತಪಸಃ ಸರ್ವೇಚಚರಿತವ್ರತಾಃ ।
ಶೌನಕಸ್ಯ ಮಹಾಸತ್ರಂ ಪ್ರಾಪ್ತಾ ಸ್ಸರ್ವೇ ದ್ವಿಜೋತ್ತಮಾಃ ।
ಯಜಧ್ವಂ ಸುಹುತೈ ರ್ಯಜ್ಞೈ ಶ್ಶಾಶ್ವತಂ ಪರಮೇಶ್ವರಂ ।
ಪಾರಂಪರ್ಯಾಗತಂಹ್ಯೇತತ್ ಪಿತ್ರಾಮೇ ಕಥಿತಂ ಪುರಾ । ಎಂದಿರುತ್ತೆ

೩೪೭ನೆ ಅಧ್ಯಾಯದಲ್ಲಿ ಪಾಂಚರಾತ್ರ ಪ್ರಕಾರವನ್ನು ಹೇಳಿ,

ಏವಂ ಸ ಭಗವಾನ್ ವ್ಯಾಸಃ ಗುರುರ್ಮಮ ವಿಶಾಂಪತೇ ।
ಕಥಯಾಮಾಸ ಸರ್ವಜ್ಞೋ ಧರ್ಮರಾಜ್ಞೋ ದ್ವಿಜೋತ್ತಮ ॥

ಋಷೀಣಾಂ ಸನ್ನಿಧೌ ರಾಜನ್ ಶೃಣ್ವತೋಃ ಕೃಷ್ಣಭೀಷ್ಮಯೋಃ ।
ತಸ್ಯಾಪ್ಯಕಥಯತ್ಪೂರ್ವಂ ನಾರದ ಸ್ಸುಮಹಾತಪಾಃ ।
ದೇವಂ ಪರಮಕಂ ಬ್ರಹ್ಮ ಶ್ವೇತಂ ಚಂದ್ರಾಭ ಮಚ್ಯುತಂ ।
ಯತ್ರಚೈಕಾನ್ತಿನೋ ಯಾನ್ತಿ ನಾರಾಯಣ ಪರಾಯಣಾಃ। ಎಂದಿರುತ್ತೆ ಅಲ್ಲಿಯೇ ಉಪಸಂಹಾರದಲ್ಲಿ,

ಏಷತೇಕಥಿತೋ ಧರ್ಮಃ ಸಾತ್ವತಃ ಕುರುನಂದನ ।
ಕುರುಷ್ವೈನಂ ಯಥಾನ್ಯಾಯ್ಯಂ ಯದಿ ಶಕ್ನೋಷಿಭಾರತ ।
ಏವಂಹಿಸಮಹಾಭಾಗೋ ನಾರದೋ ಗುರವೇ ಮಮ ।
ಶ್ವೇತಾನಾಂ ಯತಿನಾಂಚಾಹ ಏಕಾಂತಿಗತಿ ಮವ್ಯಯಾಂ ।
ವ್ಯಾಸಶ್ಚಾಕಥಯತ್ಪ್ರೀತ್ಯಾ ಧರ್ಮಪುತ್ರಾಯ ಧೀಮತೇ ।
ಸಏವಾಯಂ ಮಯಾತುಭ್ಯಂ ಆಖ್ಯಾತಃ ಪ್ರಸೃತೋಗುರೋಃ ।

ಎಂದು ಜನಮೇಜಯಪರ್ಯ್ಯನ್ತವಾಗಿ ಅವಿಚ್ಛಿನ್ನವಾಗಿ ಉಪದೇಶಪರಂಪರೆಯೂ ಬಂದಿರುವಂತೆ ಹೇಳಲ್ಪಟ್ಟಿರುತ್ತೆ

ಈ ರೀತಿಯಾಗಿ ಅನೇಕ ಮಹಾಪುರಾಣಗಳಲ್ಲಿಯೂ ಮಹಾಭಾರತಾದೀತಿಹಾಸಗಳಲ್ಲಿಯೂ ವೈದಿಕರಿಗೆ ಮುಖ್ಯಪ್ರಮಾಣವೆಂದು ಹೇಳಲ್ಪಟ್ಟ ಭಗವತ್ಪ್ರೋಕ್ತವಾದ ಪಂಚರಾತ್ರಶಾಸ್ತ್ರವನ್ನು ನಿಂದಿಸುವಂತೆ ತೋರುವ ಕೂರ್ಮಪುರಾಣಾದಿಗಳಲ್ಲಿರುವದೆಂದು ಇವರು ಉದಹರಿಸಿದ ಕೆಲವು ವಚನಗಳಿಗೆ ವಿರೋಧಾಧಿಕರಣದಲ್ಲಿ ಮೀಮಾಂಸಕರು ಶ್ರುತಿವಿರುದ್ಧವಾದ ಸ್ಮೃತಿಗಳಿಗೆ ಲೋಭಾದಿಮೂಲಕತ್ವೇನ ಅಪ್ರಾಮಾಣ್ಯವನ್ನು ನಿರ್ಧರಿಸಿದಂತೆಯೆ ಗತಿಯನ್ನು ಹೇಳಬೇಕು ಪೂರ್ವೋದಾಹೃತಗಾರುಡಪುರಾಣವಚನಗಳಲ್ಲಿ ಮಹಾಭಾರತಾದಿ ವಿರುದ್ಧವಾದದ್ದು ಯಾವದುನ್ನೂ ಪ್ರಮಾಣವಾಗಲಾರದೆಂದು ಸ್ಪಷ್ಟವಾಗಿರುತ್ತದೆ

ಮನ್ವರ್ಥವಿಪರೀತಾತುಯಾಸ್ಮೃತಿಸ್ಸಾನಶಸ್ಯತೇ ।

ಎಂದು ಮನುಸ್ಮೃತಿವಿರುದ್ಧವಾದವುಗಳಿಗೇನೇ ಅಪ್ರಾಮಾಣ್ಯ ಪ್ರೋಕ್ತಂಬಡ ಬೇಕಾಗಿರುವಲ್ಲಿ ಮನ್ವಾದಿಸ್ಮೃತಿಗಳಿಗೂ ಮೂಲಭೂತವಾದ ಶ್ರೀಪಂಚರಾತ್ರ ಶಾಸ್ತ್ರಕ್ಕೆ ವಿರುದ್ಧವಾಗಿರುವ ವಚನಗಳಿಗೆ ಪ್ರಾಮಾಣ್ಯವು ಹ್ಯಾಗೆ ಬರ್ರು ವದು ? ಇಷ್ಟುಮಾತ್ರವೇ ಅಲ್ಲ. ಅನೇಕ ಗ್ರನ್ಥಗಳನ್ನು ಮಾಡಿಯೂ ಇವ ರಿಗೆ ಆಚಾರ್ಯಕೋಟಿಪ್ರವಿಷ್ಟರಾಗಿಯೂ ಇರುವ ಅಮಲಾನನ್ದ ಯತಿಗಳು ಮಾಡಿರುವ ಕಲ್ಪತರುವೆಂಬುವ ಗ್ರನ್ಥವಾಕ್ಯದಿಂದಲೆ ಪಾಂಚರಾತ್ರ ನಿಂದಾ ವಚನಗಳು ಆಧುನಿಕರಿಂದ ಕಲ್ಪಿತಗಳೆಂದು ಸ್ಪಷ್ಟವಾಗಿ ಊಹಿಸಬಹುದಾಗಿ ರುತ್ತೆ ಹ್ಯಾಗಂದರೆ—ಶಾಂಕರಬ್ರಹ್ಮಸೂತ್ರಭಾಷ್ಯವ್ಯಾಖ್ಯಾಯಾಃ ಭಾ ಮತ್ಯಾಖ್ಯಟೀಕಾಯಾಂ ಕಲ್ಪತರೌ

"(೧) ಅಧಿಷ್ಠಾತ್ರೈವೇಶ್ವರಇತಿಮತೇನಿರಸ್ತೇ ಪ್ರಕೃತಿರಪಿಸಇತಿ ಮತಸ್ಯ ವೇದಸಂಗತಾರ್ಥತ್ವಾತ್ ಜೀವೋತ್ಪತ್ತ್ಯಾನಪಿ ಪ್ರಮಾಣತ್ವಂ. ಅತೋಜೀವಾ ಭಿನ್ನಾದ್ಬ್ರಹ್ಮಣೋಜಗತ್ಸರ್ಗಂ ಬ್ರುವತಸ್ಸಮನ್ವಯಸ್ಯಬಾಧಇತಿ ಶಂಕಾ ನಿರಾಸಾತ್ಸಂಗತಿಮಭಿಪ್ರೇತ್ಯಾಹ-ಅನ್ಯತ್ರೇತಿ

(೨) ಪಂಚರಾತ್ರಕರ್ತುರ್ವಾಸುದೇವಸ್ಯ ವೇದಾದೇವಸರ್ವಜ್ಞತ್ವಾವಗ ಮಾತ್ ಕಪಿಲ ಪತಂಜಲ್ಯಾದೀನಾಂ ಚ ಜೀವತ್ವಾತ್ ಪಂಚರಾತ್ರಸ್ಯ ಚ ಪು ರಾಣೇಷು ಬುದ್ಧಾದಿ ದೇಶನಾವತ್ ವ್ಯಾಮೋಹಾರ್ಥಮೀಶ್ವರಪ್ರಣೀತತ್ವಾನವಗ ಮಾತ್ ನ ಯೋಗಾದ್ಯಧಿಕರಣಗತಾರ್ಥತಾ.

(೩) ಅನಾನ್ತರಸಂಗತಿವಶಾದಿಹ ಪಾದೆಸ್ಯರೇಖಃ.

(೪) ಸಿದ್ಧಾನ್ತಸ್ತು ಬುದ್ಧಿಪೂರ್ವಕೃತಿಃ ಪಂಚರಾತ್ರಂ ನಿಶ್ವಸಿತಂಶ್ರುತಿಃ ।

ತೇನಜೀವಜನಿಸ್ತತ್ರಸಿದ್ಧಾಗೌಣೀನಿಯಮ್ಯತೇ ॥

ಯಾವದ್ವ್ಯೇಕದೇಶೇವೇದಾವಿರೋಧೀಶ್ವರಬುದ್ಧೇ ರ್ವೇದಮೂಲತ್ವಂ ವೇದಾದ್ವಾ ಸರ್ವವಿಷಯತ್ವಂ ಪ್ರತೀಯತೇತಾವದೇವ ಸ್ವತಃ ಪ್ರಮಾಣಂ ವೇದಾಃ ಜೀವಾ ನುತ್ಪತ್ತಿಪ್ರಮಿತೌ ॥ ತಾದೃಗ್ಬುದ್ಧಿ ಪೂರ್ವಿಕೇಶ್ವರವಚನಾನ್ನ ಜೀವೋತ್ಪತ್ತಿರವಗ

ನ್ತ್ರಂಶಕ್ಯತೇ । ಅತಃಪ್ರಮಾಣಾಪಹೃತವಿಷಯೇ ಗೌಣಂ ತದ್ವಚನಂ ನತು ಭ್ರಾನ್ತಂ " ಇತಿ

ಇದರಲ್ಲಿ ಮೊದಲನೇ ವಾಕ್ಯದಲ್ಲಿ ಶೈವಸಿದ್ಧಾನ್ತವು ವೇದವಿರುದ್ಧವಾದ್ದರಿಂದ ಇತಃ ಪೂರ್ವ ನಿರಾಕರಿಸಲ್ಪಟ್ಟಿರುವದೆಂದುನ್ನು ಪಂಚರಾತ್ರಸಿದ್ಧಾನ್ತವು ವೇದಾವಿರುದ್ಧವೆಂದುನ್ನು ಸ್ಫುಟವಾಗಿ ಹೇಳಲ್ಪಟ್ಟಿರುತ್ತೆ. ೨ನೇ ವಾಕ್ಯದಲ್ಲಿ ಪಂಚರಾತ್ರಶಾಸ್ತ್ರವು ಸರ್ವಜ್ಞನೆಂಬು ವೇದದಲ್ಲಿ ಪ್ರತಿಪಾದಿಸಲ್ಪಟ್ಟ ಶ್ರೀ ವಾಸುದೇವನಿಂದ ರಚಿಸಲ್ಪಟ್ಟಿದ್ದೆಂದುನ್ನು, ಸಾಂಖ್ಯಯೋಗ ಪಾಶುಪತಾದಿಗಳನ್ನು ಮಾಡಿದವರು ಅಲ್ಪಜ್ಞರಾದ ಜನರೆಂಬುನ್ನು, ಬುದ್ಧಾದ್ಯಾಗಮಗಳು ಅಸುರವ್ಯಾಮೋಹಾರ್ಥವಾಗಿ ಪ್ರಚಾರಪಡಿಸಲ್ಪಟ್ಟದ್ದೆಂದು ಪುರಾಣ ಗಳಲ್ಲಿರುವಂತೆ ಪಂಚರಾತ್ರಶಾಸ್ತ್ರವು ವ್ಯಾಮೋಹಾರ್ಥವಾಗಿ ಪ್ರಚಾರಪಡಿಸಲ್ಪಟ್ಟದ್ದೆಂದು ಯಾವ ಪುರಾಣದಲ್ಲಿಯೂ ಹೇಳಲ್ಪಡಲಿಲ್ಲವೆಂದುನ್ನೂ ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತೆ

೩ನೇ ವಾಕ್ಯದಲ್ಲಿ ಪರಪಕ್ಷನಿರಾಕರಣಾರ್ಥವಾದ ೨ನೇ ಅಧ್ಯಾಯ ೨ನೇ ಪಾದದಲ್ಲಿ ನಿರಸನೀಯವಲ್ಲದ ಶ್ರೀಪಾಂಚರಾತ್ರ ಪ್ರಸ್ತಾವಕ್ಕೆ ಸಾಕ್ಷಾತ್ಸಂಗತಿ ಇಲ್ಲದಿದ್ದರೂ ಆಪಾತತಃ ತೋರುತ್ತಲಿರುವಶ್ರುತಿವಿರುದ್ಧವಾದ ಜೀವೋತ್ಪತ್ತಿ ವಿಷಯದಲ್ಲಿ ಪಾಂಚರಾತ್ರಶಾಸ್ತ್ರಕ್ಕೆತಾತ್ಪರ್ಯವಿಲ್ಲವೆಂಬ ಅಂಶವನ್ನು ಸೂಚಿಸುವದಕ್ಕೆ ಸಾಂಖ್ಯಯೋಗಪಾಶುಪತಾದಿ ಮತನಿರಾಸಾನನ್ತರ ಪಾದಾನ್ತ್ಯಾಧಿಕರಣದಲ್ಲಿ ಪ್ರಸಂಗ ಸಂಗತಿಯಿಂದ ಪಾಂಚರಾತ್ರಶಾಸ್ತ್ರಪ್ರಸ್ತಾವವು ಮಾಡಲ್ಪಟ್ಟಿರುತ್ತೆ ಯೆಂದು ಸ್ಫುಟವಾಗಿ ಹೇಳಲ್ಪಟ್ಟಿರುತ್ತೆ.

೪ನೇ ವಾಕ್ಯದಲ್ಲಿ—ಭಗವನ್ತನಿಂದ ರಚಿಸಲ್ಪಟ್ಟ ಪಾಂಚರಾತ್ರಶಾಸ್ತ್ರದಲ್ಲಿರುವ ಜೀವೋತ್ಪತ್ತಿವಾಕ್ಯಕ್ಕೆ ಇತರಾಗಮವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಿದಂತೆ ಅಪ್ರಾಮಾಣ್ಯವನ್ನು ಹೇಳಲಾಗದೆಂದುನ್ನು 'ಆಯೂಥ್ಸ್ಟ್ರ ತಂ ಆದಿತ್ಯೋಯೂಪಃ ' ಇತ್ಯಾದಿ ವೇದವಾಕ್ಯಗಳಂತೆಯೇ ಗೌಣತ್ವವನ್ನು

ಒಪ್ಪಿ ಸಮನ್ವಯಮಾಡಬೇಕೆಂದುನ್ನು ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತೆ.

ಈ ವಾಕ್ಯಗಳನ್ನುಮಾತ್ರ ಒಂದುಕಡೆ ಬರದು ಗ್ರಂಥದ ಹೆಸರನ್ನು ತೋರಿಸದೆ ಆಧುನಿಕರಾದ ಪಂಚರಾತ್ರದ್ವೇಷಿಗಳಾದ ಕೆಲವ್ರು ಸ್ಮಾರ್ತರಿಗೆ ತೋರಿಸಿದರೆ ಅವರು ಅದನ್ನು ದ್ವೈತಿಗಳೊ ಅಥವಾ ವಿಶಿಷ್ಟಾದ್ವೈತಿಗಳೊಬರ ದಿರುವ ವಾಕ್ಯವೆಂಬು ನಿರ್ಣಯಿಸಿಕೊಂಡು ಬಿಸಾಡುವದರಲ್ಲಿ ಸಂದೇಹವಿಲ್ಲವು

ಹೀಗೆ ಸ್ಮಾರ್ತರಿಗೆ ಆಚಾರ್ಯಕೊಟಿಪ್ರವಿಷ್ಟರಾಗಿ ಈಗ್ಯೆ ೬ನೆ ಶತ ಮಾನಕ್ಕೆ ಪೂರ್ವದಲ್ಲಿದ್ದ ಕಲ್ಪತರುಕಾರರೇ ಪಂಚರಾತ್ರಶಾಸ್ತ್ರನಿಂದಾವಚ ನವು ಯಾವ ಪುರಾಣದಲ್ಲಿಯೂ ಇಲ್ಲವೆಂದು ಕಂಠೋಕ್ತವಾಗಿ ಹೇಳಿರುವಲ್ಲಿ ಇತರಾಗಮಗಳಿಗಿಂತಲೂ ಪಂಚರಾತ್ರಾಗಮಕ್ಕೆ ಇರುವ ಉತ್ಕರ್ಷವನ್ನು ಮಹಾಪಾಪವಶದಿಂ ಸಹಿಸದೇ ಕೂಪಕೂರ್ಮಪ್ರಾಯರಾದ ಗುರುದ್ರೋಹಿ ಗಳಾದ ಕೆಲವರು ಪಂಚರಾತ್ರನಿಂದಾವಚನಗಳನ್ನು ಕೆಲವು ಅಪ್ರಸಿದ್ಧವಾದ ಪುರಾಣಭಾಗಗಳಲ್ಲಿ ಪ್ರಕ್ಷೇಪಮಾಡಿರುವರೆಂದು ವಿವೇಕಿಗಳು ನಿಶ್ಚಯಿಸುವ ದಕ್ಕೆ ನಿರಾಟಂಕವಾಗಿರುವದು.

ಮತ್ತು ಪುರಾಣಗಳಲ್ಲಿ ಪರಸ್ಪರ ವಿರುದ್ಧವಾಗಿ ಅನೇಕಾರ್ಥಗಳು ತೋರುತ್ತಲಿರುವದರಿಂದ ಶ್ರೇಯೋರ್ಥಿಯರಾದ ಸಾತ್ವಿಕರಾದವರಿಗೆ ಉಪಾದೇ ಯವು ಯಾವದು ? ಪರಿತ್ಯಾಜ್ಯವ್ಯಾವದು ? ಎಂದು ಸಂದೇಹವುಂಟಾಗುವದು. ಇದರ ಪರಿಹಾರಕೊಸ್ಕರ ಪುರಾಣದಲ್ಲಿಯೇ ಸಾತ್ವಿಕಾದಿ ವಿಭಾಗವಂ ಮಾಡಿ ಸಾತ್ವಿಕಪುರಾಣಗಳೇ ಸಾತ್ವಿಕರಿಗೆ ಗ್ರಾಹ್ಯವೆಂದು ನಿರ್ಧರಿಸಲ್ಪಟ್ಟಿ ರುವದು ಹ್ಯಾಗೆಂದರೆ,

ಸಂಕೀರ್ಣಾಸ್ತಾಮಸಾ ಶ್ಚೈವ ರಾಜಸಾ ಸ್ಸಾತ್ವಿಕಾಸ್ತಥಾ ।
ಕಲ್ಪಾ ಶ್ಚತುರ್ವಿಧಾಃ ಪ್ರೋಕ್ತಾಃ ಬ್ರಹ್ಮಣೋ ದಿವಸಾತ್ಮಯೆ ।
ಯಸ್ಮಿನ್ ಕಲ್ಪೇತು ಯತ್ಪ್ರೋಕ್ತಂ ಪುರಾಣಂ ಬ್ರಹ್ಮಣಾಪುರಾ ।
ತಸ್ಯ ತಸ್ಯ ತು ಮಾಹಾತ್ಮ್ಯಂ ತತ್ಸ್ವರೂಪೇಣ ವರ್ಣ್ಯತೇ ।

ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕೀರ್ತ್ಯತೇ ।
ರಾಜಸೇಷು ಚ ಮಾಹಾತ್ಮ್ಯ ಮಧಿಕಂ ಬ್ರಹ್ಮಣೋ ವಿದುಃ ।
ಸಂಕೀರ್ಣೇಷು ಸರಸ್ವತ್ಯಾಃ ಪಿತೄಣಾಂ ಚ ನಿಗದ್ಯತೇ ।
ಸಾತ್ತ್ವಿಕೇಷ್ವಥ ಕಲ್ಪೇಷು ಮಾಹಾತ್ಮ್ಯ ಮಧಿಕಂಹರೇಃ ।
ತೇಷ್ವೇವ ಯೋಗಸಂಸಿದ್ಧಾ ಗಮಿಷ್ಯನ್ತಿ ಪರಾಂಗತಿಂ ।

ಎಂದು ಮತ್ಸ್ಯಪುರಾಣದಲ್ಲಿರುತ್ತದೆ.

ಅದರಲ್ಲಿಯೇ ಪ್ರಕರಣಾನ್ತರದಲ್ಲಿ—

ಸಂಕೀರ್ಣಾಸ್ತಾಮಸಾಶ್ಚೈವ ರಾಜಸಾ ಸ್ಸಾತ್ವಿಕಾಸ್ತಥಾ ।
ಕಲ್ಪಾ ಶ್ಚತುರ್ವಿಧಾಃ ಪ್ರೋಕ್ತಾ ಬ್ರಹ್ಮಣೋದಿವಸಾತ್ಮಯೆ ।
ರಜಸ್ತಮೋಮಯಾಸ್ತದ್ವತ್ತ್ರಯಸ್ತ್ರಯಉದಾಹೃತಾಃ ।
ಸಂಕೀರ್ಣೆಷುಸರಸ್ವತ್ಯಾಃಪಿತೄಣಾಂವ್ಯಷ್ಟಿರುಚ್ಯತೆ ।
ಆಗ್ನೆಶ್ಶಿವಸ್ಯಮಹಾತ್ಮ್ಯಂತಾಮಸೆಷುದಿವಾಕೃತಃ ।
ರಾಜಸೇಷುಚಮಾಹಾತ್ಮ್ಯಮಧಿಕಂಬ್ರಹ್ಮಣಸ್ಸ್ಮೃತಂ ।
ಸಾತ್ವಿಕೆಷ್ವಧಿಕಂತೆದ್ವದ್ವಿಷ್ಣೊರ್ಮಹಾತ್ಮ್ಯಮುಚ್ಯತೆ ।
ತೆಷ್ವೆವಯೊಗಸಂಸಿದ್ಧಾಗಮಿಷ್ಯಂತಿಪರಾಂಗತಿಂ । ಎಂದಿರುವದು.

ಕೌರ್ಮಪುರಾಣದಲ್ಲಿ—

ಅಸಂಖ್ಯಾತಾಸ್ತಥಾಕಲ್ಪಾಬ್ರಹ್ಮವಿಷ್ಣುಶಿವಾತ್ಮಕಾಃ ।
ಕಥಿತಾಹಿಪುರಾಣೆಷು ಮುನಿಭಿಃಕಾಲಚಿಂತಕೈಃ ।
ಸಾತ್ವಿಕೇಷು ಚ ಕಲ್ಪೇಷು ಮಾಹಾತ್ಮ್ಯಮಧಿಕಂಹರೆಃ ।
ತಾಮಸೆಷುಶಿವಸ್ಯೊಕ್ತಂರಾಜಸೇಷುಪ್ರಜಾಪತೆಃ । ಎಂದಿರುವದು

ಪಾದ್ಮಪುರಾಣದಲ್ಲಿ—

ವೈಷ್ಣವಂನಾರದೀಯಂಚತಥಾಭಾಗವತಂವರಂ ।
ಗಾರುಡಂಚತಥಾಪಾದ್ಮಂವಾರಾಹಂಶುಭನಂಸ್ಮೃತಂ ।

ಸಾತ್ವಿಕಾನಿಪುರಾಣಾನಿಶೋಭನಾನಿವರಾನನೇ ।
ಬ್ರಹ್ಮಾಂಡಂಬ್ರಹ್ಮಕೈವರ್ತಂಮಾರ್ಕಂಡೇಯಂತಥೈವಚ ।
ಭವಿಷ್ಯದ್ವಾಮನಂಬ್ರಾಹ್ಮಂರಾಜಸಾನಿನಿಬೋಧಮೇ ।
ಶೈವಮಾಗ್ನೇಯಕಂಚೈವಲೈಂಗಂಸ್ಕಾಂದಂತಥೈವಚ ।
ಕೌರ್ಮಂಚೈವತಥಾಮಾತ್ಸ್ಯಂತಾಮಸಾನಿಪ್ರಚಕ್ಷತೇ । ಎಂದಿರುವದು.

ಅದರಲ್ಲಿಯೆ ಪ್ರಕರಣಾಂತರದಲ್ಲಿ—

ಸಾತ್ವಿಕಾಮೋಕ್ಷದಾಃಪ್ರೋಕ್ತಾಃರಾಜಸಾಸ್ಸ್ವರ್ಗದಾಶ್ಶುಭಾಃ ।
ತಥೈವತಾಮಸಾದೇವಿನಿರಯಪ್ರಾಪ್ತಿಹೇತವಃ ।
ಸಾತ್ವಿಕಾನೇವಗೃಹ್ಣೀಯಾನ್ಮೋಕ್ಷಾರ್ಥೀನೈವರಾಜಸಾನ್ ।
ಸ್ವರ್ಗದಾನ್‌ತಾಮಸಾನ್‌ದೇವಿತಥೈವನಿರಯಪ್ರದಾನ್ ॥ ಎಂದಿರುವದು.

ಗಾರುಡಪುರಾಣದಲ್ಲಿ—

ಶಾಸ್ತ್ರಾಣ್ಯಪಿಚಸರ್ವಾಣಿತ್ರಿವಿಧಾನಿಮಹಾಮತೇ ।
ಯಾನಿಸತ್ವಪದಂವಿಷ್ಣುಂವದಂತಿಪರಮೇಶ್ವರಂ ।
ತಾನಿಶಾಸ್ತ್ರಾಣಿಸರ್ವಾಣಿಸಾತ್ವಿಕಾನಿಮತಾನಿವೈ ।
ಪ್ರಜಾಪತಿಂಕೃಶಾನುಂಚತಥಾದೇವೀಂಸರಸ್ವತೀಂ ।
ಪರತ್ವೇನವದಚ್ಛಾಸ್ತ್ರಂರಾಜಸಂಪರಿಚಕ್ಷತೇ ।
ಯಚ್ಛಾಸ್ತ್ರಂಲಿಂಗಪಾರಮ್ಯಂವಾಮದೇವಮುಮಾಪತಿಂ ।
ತಮಃಪ್ರವರ್ತಕಂವಕ್ತಿತತ್ತಾಮಸಮುದಾಹೃತಂ ।

ಎಂದಿರುವದು

ಭರದ್ವಾಜಸ್ಮೃತೌ—

ಸಾತ್ತ್ವಿಕೈರೇವವರ್ತೇತ ಸಾತ್ತ್ವಿಕೋಕ್ತಂ ಸಮಾಚರೇತ್ ।
ರಾಜಸಂತಾಮಸಂಚೈವ ದೂರತಃ ಪರಿವರ್ಜಯೇತ್ ।

ವಿಷ್ಣುಧರ್ಮೋತ್ತರೇ—

ಮಧ್ಯಮೋರಾಜಸೋಧರ್ಮ ಸ್ತಾಮಸ ಸ್ತ್ವಧರ್ಮಸ್ಸ್ಮೃತಃ ।
ಸಾತ್ತ್ವಿಕಸ್ಸೂತ್ತಮೋಜ್ಞೇಯಃತಸ್ಮಾತ್ಸಾತ್ತ್ವಿಕ ಮಾಚರೇತ್ ।

ಎಂದಿರುತ್ತದೆ.

ಈರೀತಿಯಾಗಿ ಸಾತ್ವಿಕ ಪುರಾಣೇತಿಹಾಸಗಳೆ ಉತ್ತಮಾಧಿಕಾರಿಗಳಿಗೆ ಗ್ರಾಹ್ಯವಾದ್ದರಿಂದ ಅವುಗಳಿಗೆ ವಿರೋಧವಾಗಿರುವ ಕೂರ್ಮಪುರಾಣ ಸೂತ ಸಂಹಿತಾದಿಗಳಲ್ಲಿರುವವೆಂದು ಇವರುಬರೆದ ಪಾಂಚರಾತ್ರನಿಂದಾ ವಚನಗಳು ಆರ್ಷವೆಂದು ಒಂದುವೇಳೆ ಒಪ್ಪಿದರೂ ಆ ವಚನಗಳು ಉತ್ತಮಾಧಿಕಾರಿಗ್ರಾಹ್ಯಗಳಲ್ಲವೆಂದು ಹೇಳಬೇಕು. ಅಥವಾ—

ಶ್ರೀಭಾಗವತೈಕಾ ದಶಸ್ಕಂಧದಲ್ಲಿ

ಯಆಶುಹೃದಯಗ್ರಂಥಿಂನಿರ್ಜಿಹೀರ್ಷುಃಪರಾತ್ಮನಃ ।
ವಿಧಿನೋಪಚರೇದ್ದೇವಂತಂತ್ರೋಕ್ತೇನಚಕೇಶವಂ ।

ಎಂಬು ವೇದಕ್ಕು, ತಂತ್ರಕ್ಕು, ಸಮುಚ್ಚಯವನ್ನು ಹೇಳಿ ಇರುವದ್ದರಿಂದಲೂ ಅದೇರೀತಿಯಾಗಿ ನಿಷ್ಪಕ್ಷ ಪಾತಿಗಳಾದ ಸ್ಮಾರ್ತ ಶ್ರೀಧರಸ್ವಾಮಿಗಳೆ ವ್ಯಾಖ್ಯಾನಮಾಡಿರುವದ್ದರಿಂದಲೂ ಪಂಚರಾತ್ರನಿಂದಾವಚನಗಳು ಸ್ವತಃ ಪ್ರಾಪ್ತವಾದ ಶ್ರುತ್ಯುಕ್ತವರ್ಣಾಶ್ರಮ ಧರ್ಮಪರಿತ್ಯಾಗಮಾಡಿ ಕೇವಲತಂತ್ರವನ್ನು ಅವಲಂಬಿಸುವವರ ಪರವೆಂದು ಉತ್ಸರ್ಗಾಪವಾದ ನ್ಯಾಯದಿಂದ ನಿರ್ಣಯಿಸಬೇಕು ಆದ್ದರಿಂದಲೆ ಗೌತಮಶಾಪ ಪ್ರಕರಣದಲ್ಲಿ

ಸ್ವಾಧ್ಯಾಯೇ ಚ ಜಪೇಚೈವತಥಾಪ್ರವಚನೇಪಿ ಚ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ।
ಶ್ರುತಿಸ್ಮೃತಿಪುರಾಣೋಕ್ತೇಷ್ವರ್ಥೇಷು ಸಕಲೇಷು ಚ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ।

ಎಂದಿರುವದು

ಈರೀತಿಯಾಗಿ ಆಧುನಿಕರು ಉದಾಹರಿಸುವ ಪಂಚರಾತ್ರನಿಂದಾವಚನ ಗಳಿಗೆ ಸಾಮಾನ್ಯವಾಗಿ ಗತಿ ಕಲ್ಪಸೆಯನ್ನು ಹೇಳಿದೆವು. ಇನ್ನುಮೇಲೆ ಇವರು ವೈದ್ಯನಾಥೀಯದಲ್ಲಿರುವದೆಂದು ಉದಹರಿಸಿರುವ ಒಂದೊಂದು ವಚನವನ್ನು ಪ್ರತ್ಯೇಕವಾಗಿ ಪರೀಕ್ಷಿಸಿ ಅದರಿಂದ ಪಂಚರಾತ್ರ ಶಾಸ್ತ್ರಕ್ಕೆ ವೇದಬಾಹ್ಯ ಪರ ತ್ವವೆಂಬ ಇವರಿಷ್ಟವು ಸರ್ವಥಾ ಸಿದ್ಧಿಸಲಾರದು ಎಂದು ನಿರೂಪಿಸಲ್ಪಡುತ್ತೆ ಆದರೆ ಆಕರಗಳನ್ನು ನೋಡದೆ ಅಚ್ಚುಹಾಕಿರುವ ವೈದ್ಯನಾಥೀಯ ಪುಸ್ತ ಕವನ್ನು ನಂಬಿ ಇವರು ಉದಹರಿಸಿರುವ ವಚನಗಳಲ್ಲಿ ಅನೇಕ ಅಶುದ್ಧಗಳು ಇದ್ದರೂ ಪೂರ್ವೋತ್ತರಸಂದರ್ಭವನ್ನು ಪೂರ್ಣವಾಗಿ ಬರಿಯದೆ ಇರುವದರಿಂದ ಅನನ್ವಿತಗಳಾಗಿ ಇದ್ದರೂ ಭಿನ್ನಪ್ರಕರಣದಲ್ಲಿನ ವಚನಗಳಿಗೆ ಭೇದವನ್ನು ತೋರಿಸದೇ ಬರದಿದ್ದರೂ ಆ ದೋಷಗಳನ್ನು ಉಪೇಕ್ಷಿಸಿ ಪ್ರಕೃತವಿಚಾರವಂ ನಡಿಸುವೆವು.

[ " ಪಾದ್ಮೇಹರಿಃ—

ಏಷಮೋಹಂಸೃಜಾಮ್ಯಾಶು ಯೊ ಜನಂ ಮೋಹಯಿಷ್ಯತಿ ।
ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿಕಾರಯ ।
ಅತಥ್ಯಾನಿ ಚ ತಥ್ಯಾನಿ ದರ್ಶಯಿತ್ವಾ ಫಲಾನಿಚ । " ]

ಎಂದು ಬರದಿರುತ್ತಾರೆ. ಈ ಪಾದ್ಮವಚನದಲ್ಲಿ ರುದ್ರನಿಗೆ ಮೋಹಶಾಸ್ತ್ರ ಪ್ರವ ರ್ತಕತ್ವವು ಹೇಳಿರುವುದೆ ಹೊರ್ತು ಪಂಚರಾತ್ರಶಾಸ್ತ್ರ ಪ್ರಸ್ತಾವವೆ ಇಲ್ಲದಕಾ ರಣ ಈ ವಚನವನ್ನು ಇವರು ಉದಹರಿಸಿರುವದು ಪ್ರಕೃತಾನುಪಯುಕ್ತವು ಅನಂತರ ಕೂರ್ಮಪುರಾಣೆ

" ತಸ್ಮಾತ್ತ್ವಂ ವೇದಬಾಹ್ಯಾನಾಂ ರಕ್ಷಣಾರ್ಥಾಯ ಪಾಪಿನಾಂ ।
ವಿಮೋಹನಾಯ ಶಾಸ್ತ್ರಾಣಿ ಕರಿಷ್ಯಾಮೋ ವೃಷಧ್ವಜ ।
ಏವಂ ಸಂಚೋದಿತೋ ರುದ್ರೋ ಮಾಧವೇನ ಮುರಾರಿಣಾ ।
ಚಕಾರ ಮೋಹಶಾಸ್ತ್ರಾಣಿ ಕೇಶವಶ್ಚ ಶಿವೇರಿತಃ ।

ಕಾಪಾಲಂ ಕಾಪಿಲಂ ವಾಮಂ ಭೈರವಂ ಪೂರ್ವಪಶ್ಚಿಮಂ ।
ಪಾಂಚರಾತ್ರಂ ಚ ಕೌಲಂ ಚ ತಥಾನ್ಯಾನಿ ಸಹಸ್ರಶಃ । ”

ಎಂಬುವವಚನವನ್ನು ಬರೆದಿರುವರು. ಈ ವಚನವು ಆಧುನಿಕ ಪುಸಕದಲ್ಲಿ ಗೌತಮಶಾಪ ಪ್ರಕರಣರೂಪವಾದ ೧೬ ನೇ ಅಧ್ಯಾಯದಲ್ಲಿರುವದು. ಇದರ ಅರ್ಥವು ಸ್ಪಷ್ಟವಾಗುವದಕ್ಕಾಗಿ ಪೂರ್ವವಚನಗಳನ್ನು ಇಲ್ಲಿ ಉದಾರಿಸುವೆವು.

ಸತೇಷಾಂ ಮಾಯಯಾ ಜಾತಾಂ ಗೋವಧ್ಯಾಂ ಗೌತಮೋಮುನಿಃ ।
ಕೇನಾಪಿ ಹೇತುನಾ ಜ್ಞಾತ್ವಾ ಶಶಾಪಾತೀವ ಕೋಪತಃ ।
ಭವಿಷ್ಯಥ ತ್ರಯೀಬಾಹ್ಯಾಃ ಮಹಾಪಾತಕಿಭಿಸ್ಸಮಾಃ ।
ಬಹುಶಸ್ತೆ ತಥಾಶಾಪಾತ್ ಜಾಯಮಾನಾಃ ಪುನಃ ಪುನಃ ।
ಸರ್ವೆ ಸಂಪ್ರಾಪ್ಯ ದೇವೇಶಂ ಶಂಕರಂ ವಿಷ್ಣುಮವ್ಯಯಂ ।
ಅಸ್ತುವನ್ ಲೌಕಿಕೈಸ್ತೋತ್ರೈ ರುಚ್ಛಿಷ್ಟಾ ಇವಸರ್ವತಃ ।
ದೇವದೇವೌ ಮಹಾದೇವೌ ಭಕ್ತಾನಾಮಾರ್ತಿನಾಶಿನೌ ।
ಕಾಮವೃತ್ಯಾ ಮಹಾಯೋಗೌ ಪಾಪಾನ್ನಸ್ತ್ರಾತುಮರ್ಹಥಃ ।
ತದಾಪಾರ್ಶ್ವಸ್ಥಿತಂ ವಿಷ್ಣುಂ ಸಂಪ್ರೇಕ್ಷ್ಯ ವೃಷಭಧ್ವಜಃ ।
ಕಿಮೇತೇಷಾಂ ಭವೇತ್ಕಾರ್ಯಂ ಪ್ರಾಹ ಪುಣ್ಯೈಷಿಣಾಮಿತಿ ।
ತತಸ್ಸ ಭಗವಾನ್ವಿಷ್ಣು ಶ್ಶರಣ್ಯೋ ಭಕ್ತವತ್ಸಲಃ ।
ಗೋಪತಿಂ ಪ್ರಾಹ ವಿಪ್ರೇನ್ದ್ರಾನಾಲೋಕ್ಯ ಪ್ರಣತಾನ್ ಹರಿಃ ।
ನವೇದಬಾಹ್ಯೆ ಪುರುಷೆ ಪುಣ್ಯಲೇಶೋಪಿ ಶಂಕರ ।
ಸಂಗಚ್ಛತೆ ಮಹಾದೇವ ಧರ್ಮೊ ವೇದಾದ್ವಿನಿರ್ಬಭೌ ।
ತಥಾಪಿ ಭಕ್ತವಾತ್ಸಲ್ಯಾದ್ರಕ್ಷಿತವ್ಯಾ ಮಹೇಶ್ವರ ।
ಅಸ್ಮಾಭಿಸ್ಸರ್ವಏವೈತೆ ಗನ್ತಾರೋ ನರಕಾನಪಿ ।

ಎಂದು ಹೇಳಿದನಂತರ „ ತಸ್ಮಾತ್ತು ವೇದಬಾಹ್ಯಾನಾಂ ” ಇತ್ಯಾದಿ ವಚನ

ಗಳಿರುವವರು. ಈರೀತಿಯಾಗಿ ,, ಭವಿಷ್ಯಥ ತ್ರಯೀಬಾಹ್ಯಾ ಮಹಾಪಾತಕಿ ಭಿಸ್ಸಮಾಃ ,, ಎಂದು ಗೌತಮರು ಕೆಲವು ಬ್ರಾಹ್ಮಣರಿಗೆ ವೇದಬಾಹ್ಯರಾಗಿ ಮಹಾಪಾತಕಿಸಮಾನರಾಗಿ ಎಂದು ಶಾಪವನ್ನು ಕೊಟ್ಟ ತರುವಾಯ ಅನೇಕ ಜನ್ಮಗಳು ಅದೇರೀತಿಯಾಗಿ ಕಳೆದನಂತರ ಆ ಬ್ರಾಹ್ಮಣರು ರುದ್ರನನ್ನು ಮತ್ತು ವಿಷ್ಣುವನ್ನು ಕುರಿತು ಈಶಾಪವನ್ನು ನಿವರ್ತಿಸಿ ರಕ್ಷಿಸಬೇಕೆಂದು ಸ್ತೋತ್ರಮಾಡಿದತರುವಾಯ ರುದ್ರನು ಇವರಿಗೆ ಏನು ಮಾಡಬೇಕೆಂದು ವಿಷ್ಣುವನ್ನು ಕೇಳಲಾಗಿ ಭಕ್ತವತ್ಸಲನಾದ ಶರಣ್ಯನಾದ ಭಗವಂತನಾದ ವಿಷ್ಣುವು ವೇದಬಾಹ್ಯರಾದವರಲ್ಲಿ ಪುಣ್ಯಲೇಶವಿಲ್ಲವಿದ್ದಾಗ್ಯೂ ಇವರು ನರಕ ಗಾಮಿಗಳಾದಾಗ್ಯೂ ಭಕ್ತವಾತ್ಸಲ್ಯದಿಂದ ನಾವು ರಕ್ಷಿಸಬೇಕಾದ್ದಾವಶ್ಯಕ ವಾದ್ದರಿಂದ ವೇದಬಾಹ್ಯರಾಗಿ ಮಹಾಪಾತಕಿ ಸಮಾನರಾದ ಇವರಿಗೆ ಮೋಹನಾರ್ಥವಾಗಿಯೂ ರಕ್ಷಣಾರ್ಥವಾಗಿಯೂ ಇರುವ ಶಾಸ್ತ್ರಗಳನ್ನು ನಾವು ಮಾಡೋಣವೆಂದು ರುದ್ರನನ್ನು ಕುರಿತು ಹೇಳಿದನಂತರ ಅದೇರೀತಿಯಾಗಿ ವಿಷ್ಣುವಿನಿಂದ ಪ್ರೇರಿತನಾದ ರುದ್ರನು ಮೋಹಶಾಸ್ತ್ರಗಳನ್ನು ಮಾಡಿದನೆಂದುನ್ನು ರುದ್ರಪ್ರೇರಿತನಾದ ವಿಷ್ಣುವು ಸಹ ಶಾಸ್ತ್ರ ಮಾಡಿದನೆಂದುನ್ನು ಹೇಳಿ

ಕಾಪಾಲಂ ನಾಕುಲಂ ವಾಮಂ ಭೈರವಂ ಪೂರ್ವಪಶ್ಚಿಮಂ ।
ಪಂಚರಾತ್ರಂ ಪಾಶುಪತಂ ತಥಾನ್ಯಾನಿ ಸಹಸ್ರಶಃ ।
ಸೃಷ್ಟ್ವಾ ತಾನೂಚತುರ್ದೇವಾ ಕುರ್ವಾಣಶ್ಯಾಸ್ತ್ರಚೋದಿತಂ ।
ಪತನ್ತೋ ನರಕೇ ಘೋರೇ ಬಹೂನ್ ಕಲ್ಪಾನ್ಪುನಃ ಪುನಃ ।
ಜಾಯನ್ತೋ ಮಾನುಷೇ ಲೋಕೇ ಕ್ಷೀಣಪಾಪ ಚ ಯಾಸ್ತತಃ ।
ಈಶ್ವರಾರಾಧನಬಲಾದ್ಗಚ್ಛಧ್ವಂ ಸುಕೃತಾಂಗತಿಂ ।

ಎಂದು ಕಾಪಾಲನಾಕುಲಾದ್ಯನೇಕ ಶಾಸ್ತ್ರಸೃಷ್ಟಿಯನ್ನು ಮಾಡಿದನಂತರ ನೀವು ವೇದಬಾಹ್ಯರಾಗಿದ್ದು ಮೋಹಶಾಸ್ತ್ರೋದಿತ ಮಾರ್ಗವನ್ನು ಅವಲಂಬಿಸಿ ಪುನಃ ಪುನಃ ಘೋರನರಕದಲ್ಲಿ ಬೀಳುತ್ತಾ ಇದ್ದು ಶಾಪಕಾಲದಲ್ಲಿ ಪ್ರಾಪ

ವಾದ ಮಹಾಪಾಪವು ಈರೀತಿಯಾಗಿ ಅನುಭವದಿಂದ ಕ್ಷಯಿಸಿದನಂತರ ಮನುಷ್ಯ ಲೋಕದಲ್ಲಿ ಈಶ್ವರನಾದ ಭಗವನ್ತನನ್ನು ಆರಾಧಿಸುವದರಿಂದ ಸದ್ಗತಿಯನ್ನು ಹೊಂದಿರಿಎಂದು ಶಾಪಗ್ರಸ್ತರಾದವರನ್ನು ಕುರಿತು ವಾಕ್ಯವಿರುವದು. ಇಲ್ಲಿ ಉಪಕ್ರಮದಲ್ಲಿ ;--

" ಭವಿಷ್ಯಥತ್ರಯೀಬಾಹ್ಯಾ ಮಹಾಪಾತಕಿಭಿಸ್ಸಮಾಃ | "

ಎಂದಿರುವದರಿಂದ " ತಸ್ಮಾದ್ಧಿವೇದಬಾಹ್ಯಾನಾಂ ರಕ್ಷಣಾರ್ಥಾಯ ಪಾಪಿನಾಂ ' ಎಂಬ ವಚನದಲ್ಲಿ ವೇದಬಾಹ್ಯಾನಾಂ ಪಾಪಿನಾಂ ಮೋಹನಾರ್ಥಾಯ ರಕ್ಷಣಾರ್ಥಾಯಚ ಶಾಸ್ತ್ರಾಣಿ ಕರಿಷ್ಯಾವಃ ಎಂದು ಅರ್ಥವನ್ನು ಹೇಳಬೇಕು ಹೀಗಾದರೆ ಇಂಥಾ ಶಾಪಗ್ರಸ್ತರಾದವರಿಗೆ ಮೋಹನಾರ್ಥಶಾಸ್ತ್ರವನ್ನು ಇವರು ಮಾಡಿದರು ರಕ್ಷಣಾರ್ಥವಾದ ಶಾಸ್ತ್ರವನ್ನು ಇವರು ಮಾಡಿದರು ಎಂದು ಸ್ಪಷ್ಟವಾಗಿ ಇಲ್ಲಿ ಹೇಳಲ್ಪಡಲಿಲ್ಲ. ಆದಾಗ್ಯೂ ಉದಾಹೃತ ಪದ್ಮಪುರಾಣ ವಚನದಲ್ಲಿ ರುದ್ರನಿಗೆ ಮೋಹಶಾಸ್ತ್ರಪ್ರವರ್ತಕತ್ವವು ಸ್ಫುಟವಾಗಿರುವದರಿಂದಲೂ, ಪಂಚರಾತ್ರಶಾಸ್ತ್ರವು ರಕ್ಷಣಾರ್ಥವಾಗಿಯೇ ಭಗವಂತನಿಂದ ಪ್ರಚಾರಿಸಲ್ಪಟ್ಟಿತೆಂದು ಮಹಾಭಾರತ ವರಾಹಪುರಾಣಾದಿಗಳಲ್ಲಿರುವದರಿಂದಲೂ, ಪಂಚರಾತ್ರಶಾಸ್ತ್ರಕ್ಕೆ ಮೋಹನಾರ್ಥತ್ವವು ಯಾವಪುರಾಣದಲ್ಲಿಯೂ ಹೇಳಲ್ಪಡಲಿಲ್ಲವೆಂದು ಕಲ್ಪತರುಕಾರರು ಘಂಟಾಘೋಷದಿಂದ ಹೇಳಿರುವದರಿಂದಲೂ, ಈ ವಚನಗಳಲ್ಲಿಯೇ ವಿಷ್ಣುವಿಗೆ ಭಕ್ತವತ್ಸಲತ್ವ ಶರಣ್ಯತ್ವ ಭಗವತ್ತ್ವಾದಿ ವಿಶೇಷಣಗಳಿರುವದರಿಂದಲೂ ಮೋಹನಾರ್ಥವಾದ ಕಾಪಾಲಾದಿಶಾಸ್ತ್ರವನ್ನು ರುದ್ರನು ಮಾಡಿದನೆಂದೂನ್ನೂ, ಗೌತಮಶಾಪಗ್ರಸ್ತರಾದ ಬ್ರಾಹ್ಮಣರು ಅಂಥಾ ಮೋಹಶಾಸ್ತ್ರಗಳನ್ನುನೋಡಿ ಮೋಹಗೊಂಡು ತದರ್ಥಾನುಷ್ಠಾನದಿಂದ ಪುನಃಪುನಃ ನರಕಾನುಭವಮಾಡಿದನಂತರ ಶಾಪಹೇತುಕವಾದ ಪಾಪವು ಕ್ಷಯಿಸಲಾಗಿ ಶಾಪಾವಸಾನಕಾಲದಲ್ಲಿ ಮನುಷ್ಯಲೋಕದಲ್ಲಿ ವೈಷ್ಣವಕುಲದಲ್ಲಿ ವಿಶಿಷ್ಟಜ

ನ್ನ ಪ್ರಾಪ್ತವಾಗಲು ಭಗವಂತನನ್ನು ಆರಾಧಿಸಿ ಸದ್ಗತಿಯನ್ನು ಹೊಂದುವ ದಕ್ಕಾಗಿ ಭಗವದಾರಾಧನಪ್ರತಿಪಾದಕವಾದ ಪಂಚರಾತ್ರಶಾಸ್ತ್ರವನ್ನು ವಿಷ್ಣು ವು ರಚಿಸಿದನೆಂದುನ್ನೂ, ಪೂರ್ವೋತ್ತರಾದ್ಯನೇಕಸಂದರ್ಭಾನುಸಾರ ವಾ ಕ್ಯಾರ್ಥ ನಿರ್ಣಯ ಮಾಡಬೇಕಾಗಿರುವದು.

ಆದ್ದರಿಂದ ಈ ಕೂರ್ಮಪುರಾಣವಚನದಿಂದಲೂ ಪಂಚರಾತ್ರಶಾಸ್ತ್ರ ಕ್ಕೆ ವೇದಬಾಹ್ಯಪರತ್ವವು ಸಿದ್ಧಿಸಲಾರದಕಾರಣ ಈ ವಚನವನ್ನು ಇವರು ತಮ್ಮ ಇಷ್ಟಸಾಧನಕ್ಕಾಗಿ ಉದಾಹರಿಸಿರುವದು ಈವಚನದ ಅರ್ಥವನ್ನು ಅರಿಯದೇ ಇರುವದರಿಂದಲೇ ಎಂದು ತಿಳಿಯುವದು.

ಅನಂತರ [ " ಶ್ರೀಭಾಗವತದಲ್ಲಿ ;—

ತ್ರಿಚತ್ರೀಯಉನಶ್ಲೋಕಪುತ್ರಃ ಕೃಷ್ಣಮನುವ್ರತಃ ।

ತೇನೋಕ್ತಂ ಸಾತ್ವತಂತಂತ್ರಂ ಯಜ್ಞಾತ್ವಾಭಕ್ತಿಮಾರ್ಗಭವೇತ್]

ಯತ್ರಸ್ತ್ರೀಶೂದ್ರದಾಸಾನಾಂ ಸಂಸ್ಕಾರೋವೈಷ್ಣವಸ್ಸ್ಮೃತಃ । "

ಎಂದುಬರೆದಿರುವರು

ಈವಚನವು ಶ್ರೀ ಭಾಗವತದ ಪ್ರಾಚೀನಕೋಶಗಳಲ್ಲಿ ಕಾಣುವದಿಲ್ಲ. ನವೀನವಾದ ಕೆಲವು ಕೋಶಗಳಲ್ಲಿ ಇದ್ದರೂ ವಿಜಯಧ್ವಜೀಯದಲ್ಲಿಯೂ, ಶ್ರೀಧರೀಯದಲ್ಲಿಯೂ ವ್ಯಾಖ್ಯಾಕರ್ತರಿಂದ ವ್ಯಾಖ್ಯಾನಮಾಡಲ್ಪಡದೆ ಇರುವ ದರಿಂದ ನಂಬತಕ್ಕದ್ದಲ್ಲ ವಲ್ಲಭಮತಕ್ಕೆ ಭಾಷ್ಯಕಾರರಾದ ವಲ್ಲಭಾಚಾ ರ್ಯರು ಒಂದು ಶ್ಲೋಕವನ್ನೂ ಬಿಡದೆ ಮಾಡಿರುವ ವ್ಯಾಖ್ಯಾನದಲ್ಲಿಯೂ ತದ ನುಸಾರಿಗಳಾದ ಮೂಲಕೋಶಗಳಲ್ಲಿಯೂ ಉತ್ತರದೇಶಗಳಲ್ಲಿ ಮುದ್ರಿತವಾದ ಕೋಶಗಳಲ್ಲಿಯೂ ಕಾಣದೆಯಿರುವದರಿಂದ ಸರ್ವಥಾ ಇದು ಪ್ರಕ್ಷಿಪ್ತವು.

ಒಂದುವೇಳೆ ಶ್ರೀಭಾಗವತದಲ್ಲಿ ಇರುವದೆಂದು ಒಪ್ಪಿಕೊಂಡರೂ.

" ಜಾಯಮಾನೋ ಹವೈ ಬ್ರಾಹ್ಮಣಸ್ತ್ರಿಭಿರ್ಋಣವಾಜಾಯತೇಬ್ರಹ್ಮಚ ರ್ಯೇಣಋಷಿಭ್ಯೋಯಜ್ಞೇನ ದೇವೇಭ್ಯಃ ಪ್ರಜಯಾಪಿತೃಭ್ಯಃ " ಇತ್ಯಾ

ದಿ ವಾಕ್ಯಗಳಲ್ಲಿರುವ ಬ್ರಾಹ್ಮಣಾದಿ ಪದವು ತ್ರೈವರ್ಣಿಕೋಪಲಕ್ಷಣವಾಗಿರು ವಂತೆ ಚಾತುರ್ವರ್ಣಿಕಾಧಿಕಾರಿಕದೀಕ್ಷಾಬೋಧಕ ಪ್ರಾಗ್ವೋಕ್ತಾನೇಕ ಪ್ರ ಮಾಣಾನುಸಾರವಾಗಿ 'ಸ್ತ್ರೀಶೂದ್ರದಾಸಾನಾಮಪಿ' ಎಂದು ಉಪಲಕ್ಷಣಪರವಾ ಗಿ ಅರ್ಥವನ್ನು ಹೇಳಬೇಕು. ಆದ್ದರಿಂದ ಈ ವಚನೋದಾಹರಣವು ಅಸಂ ಗತವು.

ಅನಂತರ [" ವಾಸಿಷ್ಠೇಲೈಂಗೇಪಿ—

ತತೋವಿಷ್ಣೋಃಪ್ರಸಾದೇನ ವೇದಮಾರ್ಗಾತಿವರ್ತಿನಾಂ ।

ಶಾಂಡಿಲ್ಯಃಸಂಹಿತಾಂಚಕ್ರೇ ವೈಷ್ಣವೀಂ ಮಹತೀಂ ಮುನೇ ॥

ತಸ್ಯಾಂಚಕ್ರುರ್ಮುನೇದೀಕ್ಷಾಂಪಾಷಂಡಾಃಪಾಪಯೋನಯಃ॥ " ]

ಎಂದು ಬರೆದಿರುತ್ತಾರೆ. ಈ ವಚನವನ್ನು ಆರ್ಷವೆಂದನ್ನು, ಸಾತ್ವಿಕರಿಗೆ ಪ್ರಮಾಣವೆಂದುನ್ನು ಸ್ವೀಕರಿಸಿದರೂ ಮೇಲೆ ಹೇಳಿದ ಕೂರ್ಮ ಪುರಾಣದಂತೆ ಯೆ ಇದಕ್ಕುಅರ್ಥಹೇಳಬೇಕು.

ಹ್ಯಾಗಂದರೆ—

" ಭವಿಷ್ಯಥತ್ರಯಿಬಾಹ್ಯಾ ಮಹಾಪಾತಕಿಭಿಸ್ಸಮಾಃ । "

ಎಂದು ಗೌತಮಶಾಪಗ್ರಸ್ತರಾಗಿ ವೇದಬಾಹ್ಯರಾಗಿರುವ ಬ್ರಾಹ್ಮಣರು ಅನೇ ಕಕಾಲ ನರಕಾನುಭವವನ್ನುಮಾಡಿ ಶಾಪಾವಸಾನಕಾಲದಲ್ಲಿ ವೈದಿಕೋತ್ತಮ ರಾದ ವೈಷ್ಣವರ ಕುಲದಲ್ಲಿ ಪ್ರಾಪ್ತನಾಗಲು ಅವರು ಸದ್ಗತಿಯನ್ನು ಹೊಂ ದುವದಕ್ಕಾಗಿ ಶ್ರೀಮಹಾವಿಷ್ಣುಪ್ರಸಾದ ಬಲದಿಂದ ಶಾಂಡಿಲ್ಯರು ಮಾಡಿದ ಸಂಹಿತೆಯಲ್ಲಿ ಅವರು ಅಂತಿಮಶರೀರದಲ್ಲಿ ದೀಕ್ಷೆಯನ್ನು ವಹಿಸಿದರು ಎಂದರ್ಥ ವು. ಈ ಅರ್ಥವು ಉದಾಹೃತ ಕೂರ್ಮಪುರಾಣಾನುಸಾರಿಯಾಗಿಯು ಮಹಾ ಭಾರತಾದ್ಯನೇಕಪ್ರಮಾಣಾವಿರುದ್ಧವಾಗಿಯು ಇರುವುದು. ಇಲ್ಲಿ ವೇದಮಾ ರ್ಗಾತಿ ವರ್ತಿತ್ವಪಾಷಂಡತ್ವ ಪಾಪಯೋನಿತ್ವ ವಿಶೇಷಣಗಳು ಕೂರ್ಮಪುರಾಣ ವಚನಾರ್ಥಸ್ಮಾರಣಕ್ಕಾಗಿ ಭೂತಪೂರ್ವಗತಿಯಿಂದ ಉಪಾತ್ತವಾಗಿರುವವು.

ಅನಂತರ ಕೂರ್ಮೆ—

["ಅನ್ಯಾನಿ ಚೈವಶಾಸ್ತ್ರಾಣಿ ಲೋಕೆಸ್ಮಿನ್ಮೋಹನಾಯುವೈ।
ವೇದವಾದ ವಿರುದ್ಧಾನಿ ಮಯೈವ ಕಥಿತಾನಿ ತು ।
ವಾಮಂ ಪಾಶುಪತಂಕಾಲಂ ಲಾಂಗಲಂ ಚೈವ ಭೈರವಂ ।
ನಸೇವ್ಯಮೆತತ್ಕಥಿತಂ ವೇದಬಾಹ್ಯಂ ತಥೇತರತ್ । "]

ಎಂದು ಬರೆದಿರುತ್ತಾರೆ. ಈವಚನದಲ್ಲಿ ಪಂಚರಾತ್ರ ಪ್ರಸಕ್ತಿಯೇ ಇಲ್ಲದೇ ಇರುವುದ್ದರಿಂದಲೂ ಪಂಚರಾತ್ರಕ್ಕೆ ವೇದವಿರೋಧ ಲೇಶವು ಇಲ್ಲದೆ ಚತುರ್ವೇದ ಸಂಮಿತತ್ವವು ಮಹಾಭಾರತಾದ್ಯುದಾಹೃತ ಪ್ರಮಾಣಗಳಲ್ಲಿ ತಿಳಿಯು ಬರುವದ್ದರಿಂದಲೂ ಈ ವಚನವನ್ನು ಪ್ರಕೃತದಲ್ಲಿ ಇವರು ಉದಾಹರಿಸಿರುವದು ಅಸಂಗತವೆಂದು ತಿಳಿಯುವದು ಅನಂತರ—

["ಅಥಾಂಶೋಸ್ಸಾತ್ವತೋನಾಮ ವಿಷ್ಣು ಭಕ್ತಃ ಪ್ರತಾಪವಾನ್ ।
ಮಹಾತ್ಮಾದಾನನಿರತಃ ಧನುರ್ವೇದ ವಿದಾಂವರಃ ।
ಸನಾರದಸ್ಯ ವಚನಾ ದ್ವಾಸುದೇವಾರ್ಚ್ಚನೇರತಃ ।
ಶಾಸ್ತ್ರಂ ಪ್ರವರ್ತಯಾಮಾಸ ಕುಂಡಗೋಳಾದಿ ಭಿಶ್ರಿತಂ ।
ತಸ್ಯನಾಮ್ನಾತು ವಿಖ್ಯಾತಂ ಸಾತ್ವತಂನಾಮ ಶೋಭನಂ ।
ಪ್ರವರ್ತತೆ ಮಹಾಶಾಸ್ತ್ರಂ ಕುಂಡಾದೀನಾಂ ಹಿತಾವಹಂ । "]

ಎಂದು ಬರದಿರುತ್ತಾರೆ. ಈವಚನವು ಯದುವಂಶರಾಜ ಪರಂಪರೆಯುನ್ನು ಹೇಳುವ ಪ್ರಕರಣದಲ್ಲಿ ಕೂರ್ಮಪುರಾಣದಲ್ಲಿ ೨೪ನೆ ಅಧ್ಯಾಯದಲ್ಲಿ ನವೀನಕೋಶಗಳಲ್ಲಿರುವದು. ಅಂಶು ಎಂಬ ಮಹಾರಾಜನಿಗೆ ಸತ್ತ್ವತನೆನ್ನುವ ಕುಮಾರನೆಂಬ ವಿಷಯವು ವಿಷ್ಣುಪುರಾಣ ಭಾಗವತಾದ್ಯನೇಕ ಪ್ರಮಾಣಗಳಲ್ಲಿರುವದು. ಆಸತ್ತ್ವತನಿಗೆ ಸಾತ್ತ್ವತ ಶಾಸ್ತ್ರ ಪ್ರಣೇತತ್ವ ಮತ್ತೆಯಾವಪುರಾಣದಲ್ಲಿಯೂ ಹೇಳಲ್ಪಟ್ಟಿಲ್ಲಾ. ಆದ್ದರಿಂದಾ ಇದು ಸಂದೇಹಾಸ್ಪದವೆ. ಒಂದುವೇಳೆ ಆರ್ಷವಾಗಿದ್ದಾಗ್ಯೂ ಭಾಗವತದಲ್ಲಿ ಇರುವುದೆಂದು ಇವರು ಉದಹರಿಸಿದ ವಚ

ನಕ್ಕೆ ಉಪಲಕ್ಷಣ ಪರತ್ವವನ್ನು ಹೇಳಿದಂತೆಯೆ ಈ ವಚನಕ್ಕೂ ' ಕುಂಡಗೋ ಳಕಾಧಿಭಿರಪಿಶ್ರಿತಂ ಕುಣ್ಡಾದೀನಾಮಪಿ ಹಿತಾವಹಂ ' ಎಂದು ಅರ್ಥವನ್ನು ಅನೇಕ ಪ್ರಮಾಣಾವಿರೋಧಕ್ಕಾಗಿ ಹೇಳಬೇಕು. ಹಾಗಾದರೇನೆ ಸಾತ್ವತನಿಗೆ ಹೇಳಿರುವ ವಿಷ್ಣುಭಕ್ತತ್ವ ಮಹಾತ್ಮತ್ವ ದಾನನಿರತತ್ವ ವಾಸುದೇವಾರ್ಚ್ಚಾರತ ತ್ವವಿಶೇಷಣಗಳು ಸಾತ್ವತಕ್ಕೆ ಹೇಳಿರುವ ಶೋಭನತ್ವ ಮಹಾಶಾಸ್ತ್ರತ್ವ ವಿಶೇ ಷಣಗಳುಸಹ ಸಂಗತೆಗಳಾಗುವವು. ಇಲ್ಲದೇ ಇದ್ದರೆ ಅವುಗಳನ್ನು ಇಲ್ಲಿ ಹೇಳಿ ರುವದು ವ್ಯರ್ಥವಾಗಬೇಕಾಗಿ ಬರುವದು. ಆದ್ದರಿಂದ ಈವಚನಾರ್ಥವನ್ನರಿ ಯದೇ ಈ ವಚನವನ್ನು ಪ್ರಕೃತ ಉಪಹರಿಸಿರುವದು ಭಗವತ್ಪ್ರೋಕ್ತವಾದ ಶ್ರೀಪಂಚರಾತ್ರಕ್ಕೆ ವೇದವಿರೋಧ ಲೇಶವೂ ಇಲ್ಲದಕಾರಣ [ " ಸೂತಸಂಹಿ ತಾಯಾಂ—ಶ್ರೇಯಾನ್ವೇದೋದಿತೋಧರ್ಮಃ ಪರಧರ್ಮೋ ಭಯಾವಹಃ। ವೇದಂ ವೇದೇತರಂಮಾರ್ಗಂ ಸಮಂಪಶ್ಯನ್ಪ್ರಭ್ರಪದಭಾ। ನಿಮಗ್ನಸ್ಸರ್ವ ದಾಮತ್ರ್ಯೋ ಭವೇನ್ನಾತ್ರ ವಿಚಾರಣಾ ॥ ಮಾನವೇಚ—ಅತಶ್ಚ ವೇದಾ ವೇ ದಾನ್ತಾ ಸ್ಮೃನ್ಮೂಲಾನ್ಯ ಖಿಲಾನಿಚ । ಧಾರಣೀಯಾನಿ ಸಂಶುದ್ಧ್ಯೈ ತ್ಯಾ ಜ್ಯಾನ್ಯೇವಪರಾಣಿಚ ॥ ಇತೋನ್ಯಾನಿತು ಶಾಸ್ತ್ರಾಣಿ ಲೋಕೇಸ್ಮಿನ್ಯಾನಿ ಕಾನಿಚಿತ್। ನತೇಷುರಮತೇಧೀರಃ ಪಾಷಂಡೋ ರಮತೇಯಮಿ " ] ಎಂದು ವಚನವನ್ನು ಬರದು ಇರುವದು ಪ್ರಕೃತಾನುಪಯುಕ್ತವು -

ಅನಂತರ- [ "ಸ್ಕಾನ್ದೆಸೂತಸಂಹಿತಾಯಾಂ ಯಜ್ಞವೈಭವಖಣ್ಡೆ ೩೨ ಅಧ್ಯಾಯೆ ಬ್ರಾಹ್ಮಣೈಶ್ಚ ಪುನಸ್ಸರ್ವೈರ್ಗೌತಮೇನಸುರಕ್ಷಿತೈಃ।

... ... ... ... ... ...

ಬೌದ್ಧೆಬಾರ್ಹಸ್ಪತೆಚೈವ ತಥಾಪಾಶುಪತೆಪಿಚ ।
ಶಾಂಭವೇದೀಕ್ಷಿತಾಯೋಯಂ ಭವತಬ್ರಾಹ್ಮಣಾಧಮಃ ।
ಪಾಷಣ್ಡೆಷುತಥಾನ್ಯೇಷು ಮಾರ್ಗೆಷ್ವಶ್ರೌತಕೆಷುಚ ।
ಶ್ರದ್ಧಯಾದೀಕ್ಷಿತಾಯೋಯಂ ಭವತಬ್ರಾಹ್ಮಣಾಧಮಃ ।

ಪಾಂಚರಾತ್ರೇಚಕಾಪಾಲೇತಥಾಕಾಲಾಮುಖೇಪಿಚ ।

ಶಾಕ್ತೈಚ ದೀಕ್ಷಿತಾಯೂಯಂ ಭವತಬ್ರಾಹ್ಮಣಾಧಮಾಃ ।" ]

ಎಂದು ಉದಾಹರಿಸಿರುವರು. ಈ ಕೊನೇ ವಚನದಲ್ಲಿ ಪಾಂಚರಾತ್ರ ಮಾತ್ರದಲ್ಲಿ ದೀಕ್ಷಿತರಾದವರಿಗೂ ಮತ್ತು ಕಾಪಾಲಾದ್ಯೈಕೈಕತಂತ್ರಮಾತ್ರದಲ್ಲಿ ದೀಕ್ಷಿತರಾದವರಿಗೂ ನಿಂದೆಯು ಹೇಳಲ್ಪಡುವದಿಲ್ಲ. ಹಾಗಾದರೆ ಪೂರ್ವೋಕ್ತಮಹಾಭಾರತಾದ್ಯನೇಕ ಪ್ರಮಾಣವಿರೋಧ ಪ್ರಸಕ್ತವಾಗುವದು ಮತ್ತು "ಪಾಶುಪತೇ ಶಾಂಭವೇ" ಎಂದು ಪೂರ್ವೋಕ್ತವಚನದೊಡನೆ ಪೌನರುಕ್ತ್ಯಪ್ರಸಕ್ತವಾಗುವದು. ಆದ್ದರಿಂದ ಸರ್ವೋತ್ಕೃಷ್ಟವಾದ ಪಾಂಚರಾತ್ರತಂತ್ರವನ್ನು ಪ್ರಥಮತಃ ಪರಿಗ್ರಹಿಸಿ ಅನಂತರ ಕಾಪಾಲಾದಿ ನಿಕೃಷ್ಟ ತಂತ್ರಗಳಲ್ಲಿ ಪ್ರವರ್ತಿಸಿಯೆಂಬು ಈ ಶ್ಲೋಕ ತಾತ್ಪರ್ಯವು. ಹಾಗಾದರೆ ಪಾಂಚರಾತ್ರೇಚೇತ್ಯಾದಿ ಚಕಾರವೂ ಸಮುಚ್ಚಯಾರ್ಥವಾಗಿ ಸಂಗತವಾಗುವದು. ಕಾಪಾಲಾದ್ಯೈಕೈಕ ತಂತ್ರದೀಕ್ಷಿತರನಿಂದೆ ಪೂರ್ವದಲ್ಲಿದ್ದರೂ ಉತ್ಕೃಷ್ಟ ತಂತ್ರವನ್ನು ಪ್ರಥಮತಃ ಪರಿಗ್ರಹಿಸಿ ಅನಂತರ ಅದನ್ನು ಪರಿತ್ಯಜಿಸಿ ನಿಕೃಷ್ಟ ತಂತ್ರವನ್ನು ಸ್ವೀಕರಿಸುವದು ಅತ್ಯಂತ ಪಾತಕದೋಷಹೇತುವಾಗಿರುವದರಿಂದ ಅನೇಕ ತಂತ್ರಗಳಲ್ಲಿ ಪ್ರವಿಷ್ಟರಾಗಲೀ ಯೆಂದು ಪೃಥಕ್ಕಾಗಿ ಶಾಪವಿರುವದು ಸಾರ್ಥಕವಾಗುವದು. ಆದ್ದರಿಂದ ಪಾಂಚರಾತ್ರ ಮಾತ್ರದಲ್ಲಿ ದೀಕ್ಷಿತರಾದ ವೈದಿಕರಿಗೆ ಇಲ್ಲಿ ನಿಂದೆ ಇಲ್ಲದಿರುವದರಿಂದ ಈ ವಚನಾರ್ಥವನ್ನು ಪರ್ಯಾಲೋಚಿಸದೆ ಇಲ್ಲಿ ಈ ವಚನವನ್ನು ಉದಾಹರಿಸಿರುವರೆಂದು ಭಾವಿಸಬೇಕು

ಈ ರೀತಿಯಾಗಿ ಇವರು ಉದಾಹರಿಸಿರುವ ವಚನಗಳನ್ನು ಪ್ರತ್ಯೇಕವಾಗಿ ಪರ್ಯಾಲೋಚಿಸಿದರೂ ಪಾಂಚರಾತ್ರಶಾಸ್ತ್ರಕ್ಕೆ ವೇದಬಾಹ್ಯಪರತ್ವವು ಸಿದ್ಧಿಸಲಾರದು. ಮತ್ತು ಸೂತಸಂಹಿತೆಯಲ್ಲಿನ ಗೌತಮಶಾಪ ಪ್ರಕರಣಕ್ಕೆ ಸಮಾನಪ್ರಕರಣವಾದ ವರಾಹಪುರಾಣದ ಗೌತಮಶಾಪಪ್ರಕರಣದಲ್ಲಿಯು ಶೈವಾಗಮಪ್ರವಿಷ್ಟರಾಗಲೀ ಯೆಂದು ಮಾತ್ರವೆ ಶಾಪವಿರುತ್ತೆ.

ಪಶ್ಚಿಮರಂಗಮಾಹಾತ್ಮ್ಯದಲ್ಲಿಯಂತೂ ಅದೇ ಗೌತಮರೆ ನಾರದರಿಂದ ಪಂಚ ರಾತ್ರವನ್ನು ಉಪದೇಶಮಾಡಿಕೊಂಡರೆಂದು ಸ್ಪಷ್ಟವಾಗಿ ಇರುವದು ಎಂದು ಪೂರ್ವದಲ್ಲಿಯೆ ವಿಸ್ತರಿಸಲ್ಪಟ್ಟಿರುವದ್ದರಿಂದ ಶೈವಾಗಮಕ್ಕು ಇತರಾಗಮ ಕ್ಕೂ ವೈಲಕ್ಷಣ್ಯವನ್ನ ಸಹಿಸದ ಪಾಂಚರಾತ್ರ ದ್ವೇಷಿಗಳು ಇಲ್ಲಿ ಪಾಂಚ ರಾತ್ರ ಪದವನ್ನು ಶೇರಿಸಿರಬಹುದು ಆರ್ಷವಾಗಿಯಿದ್ದರೂ ಅದರ ತತ್ತ್ವಾ ರ್ಥವು ಪೂರ್ವದಲ್ಲಿಯೇ ಸ್ಫುಟೀಕರಿಸಿರುತ್ತೆ, ಆದ್ದರಿಂದ ವೈದ್ಯನಾಥೀಯದಲ್ಲಿ ರುವದೆಂದು ಇವರು ಬರದುಯಿರುವ ವಚನಗಳು ಶ್ರೀಪಾಂಚರಾತ್ರ ಶಾಸ್ತ್ರಕ್ಕೆ ಅಪ್ರಾಮಾಣ್ಯವನ್ನೆ ಆಗಲಿ ವೆದಬಾಹ್ಯಪರತ್ವರವನ್ನೆ ಆಗಲೀ ಯಂದಿಗೂ ಬೋಧಿಸಲಾರದು. ಹೀಗಿರುವಲ್ಲಿ "ಇತ್ಯಾದಿವಚನಗಳಿಂದ ಪಾಂಚರಾತ್ರಾದ್ಯಾ ಗಮಗಳು ವೇದಬಾಹ್ಯರಿಗೋಸ್ಕರ ಮಾಡಲ್ಪಟ್ಟ ಮೋಹಶಾಸ್ತ್ರಗಳೆಂದು ನ್ನೂ ಸಾತ್ವತ ತಂತ್ರವು ಕುಂಡಗೋಳಕಾದಿಗಳಿಗೋಸ್ಕರ ಮಾಡಲ್ಪಟ್ಟಿರು ವವೆಂತಲೂ ಶಾಂಡಿಲ್ಯಾದಿ ಸಂಹಿತೆಗಳು ಸ್ತ್ರೀಶೂದ್ರಾದಿ ವಿಷಯಗಳೆಂದು ನ್ನೂ ಸ್ಪಷ್ಟವಾಗಿ ತಿಳಿಯುವದಲ್ಲದೆ ಗೌತಮರು ತಮಗೆ ಅಪರಾಧಮಾಡಿದ ಬ್ರಾಹ್ಮಣರಿಗೆ ನೀವು ಪಾಂಚರಾತ್ರಾದ್ಯಾಗಮೋಕ್ತ ದೀಕ್ಷಾಬದ್ಧರಾಗಿ ಕೆಟ್ಟು ಹೋಗಿ ಶಾಪಮ್ ಎಂದು ಕೊಟ್ಟಿರುವವಿಷಯದಲ್ಲಿ ಈ ಗೌತಮರೆ ಪಾಂಚ ರಾತ್ರಾದ್ಯಾಗಮೋಕ್ತ ವಿಧಿಯಿಂದ ಈ ದೇವರನ್ನ ಪ್ರತಿಷ್ಠೆಮಾಡಿದರೆಂದೇ ಆಗಲಿ ಪಾಂಚರಾತ್ರಾದ್ಯಾಗಮೋಕ್ತ ವಿಧಿಯಿಂದ ಪೂಜಿಸಿದರೆಂದೇ ಆಗಲಿ ವಿದ್ವಾಂಸರು ಎಂದಿಗೂ ಹೇಳಲಾರರು " ಎಂದು ಬರದಿರುವದು ಅಜ್ಞಾನ ಪ್ರಲಾಪವೆಂದು ವಿದ್ವಾಂಸರಾದವರು ಹೇಳುವದರಲ್ಲಿ ಸಂದೇಹವಿಲ್ಲವು.

ಆದ್ದರಿಂದ ಸ್ಥಲಪುರಾಣದಲ್ಲಿ ಹೇಳಿರುವಂತೆ ಆದಿಯಲ್ಲಿ ಮಹರ್ಷಿ ಗೌತಮರು ನಾರದರಿಂದ ಪಂಚರಾತ್ರವನ್ನು ಉಪದೇಶಿಸಿಕೊಂಡು ಶ್ರೀರಂಗ ನಾಥದೇವರನ್ನು ಪೂಜಿಸಿದರು. ತದಾಪ್ರಭೃತಿ ಅವಿಚ್ಛಿನ್ನವಾಗಿ ಪಂಚರಾತ್ರ ಕ್ರಮವಾಗಿ ಪೂಜೆ ನಡೆಯುತ್ತಿರುವದು. ಈಗಬಂದಿರುವ ಅವ್ಯಕ್ತಿಂತಲೂ

ಅತ್ಯಧಿಕನಾಗಿ ದುಷ್ಟರಿಂದ ಪ್ರಾಪ್ತವಾಗಿದ್ದ ಅನೇಕವಿಧವಾದ ಅವದ್ಯವನ್ನು ಸರ್ವಶಕ್ತನಾದ ಭಕ್ತಪರಾಯಣನಾದ ಭಗವಂತನಾದ ಶ್ರೀ ರಂಗನಾಥನು ಪರಿಹರಿಸಿ ಶಾಸ್ತ್ರೋಕ್ತವಾದ ಪೂಜೆಯನ್ನು ಕೈಗೊಂಡು ಭಕ್ತರನ್ನ ಸಲಹಿದ ಹಾಗೆ ಈಗಲೂ ಸಲಹುವದರಲ್ಲಿ ಸಂದೇಹವಿಲ್ಲವು.

ಈರೀತಿಯಾಗಿ ಪಂಚರಾತ್ರವು ಪ್ರಮಾಣವೆಂದನ್ನೂ ವೈದಿಕೋತ್ತಮರಿಗೆ ಅದರಲ್ಲಿ ಅಧಿಕಾರವೆಂದುನ್ನೂ ತಿಳಿಸುವ ಪ್ರಬಲಾನೇಕಪ್ರಮಾಣಗಳಿರುವದ್ದರಿಂದ ಅವುಗಳಿಂದ ಭಾಧಿತವಾದ ಸೂತಸಂಹಿತೆಯ ಯಜ್ಞವೈಭವ ಖಂಡದ ಪುತ್ತರಾರ್ಧದ ೪ನೆ ಅಧ್ಯಾಯದ ವಚನಗಳನ್ನುದಾಹರಿಸಿ ಪಂಚರಾತ್ರ ಪ್ರಾಮಾಣ್ಯ ಸಾಧನೋಪಕ್ರಮವು ಯಿವರಿಗೆ ಆಶಾಮೋದಕದಂತೆ ಆಗಿರುವದು. ಆದ್ದರಿಂದ ಕೂರ್ಮ ಪುರಾಣಾದಿವಚನಗಳಿಗೆ ಕಲ್ಪಿಸಿದ ಗತಿಯೇ ಈವಚನಗಳಿಗೂ ಕಲ್ಪಿಸಬೇಕು ಮತ್ತು ಈ ಸೂತಸಂಹಿತೆಯಲ್ಲಿ ೨ನೆ ಅಧ್ಯಾಯದಲ್ಲಿ

ಉಕ್ತಂವೇದಾಂತವಿಜ್ಞಾನಂಯುಷ್ಮಾಕಂಮುನಿಪುಂಗವಾಃ।
ವ್ರತಂಪಾಶುಪತಂಚೀರ್ಣಂಯ್ಯೈರ್ದ್ವಿಜೈರಾದರೇಣತು ।
ತೇಷಾಮೆವೋಪದೇಷ್ಟವ್ಯಮಿತಿವೇದಾನುಶಾಸನಂ ॥

ಎಂದು ಪಾಶುಪತವ್ರತಧಾರಿಗಳಿಗೆ ಸೂತ ಸಂಹಿತೋಕ್ತಜ್ಞಾನವನ್ನು ಉಪದೇಶಿಸಬೇಕೆಂದಿರುವದು. ಕೊನೇಭಾಗದಲ್ಲಿ ಇವರು ಉಪಹರಿಸಿ ಇರುವ ವಚನಗಳಲ್ಲಿ ಅಂಥಾ ಪಾಶುಪತ ನಿಂದೆಯು ಇರುವದು. ಆದ್ದರಿಂದ ಉಪಕ್ರಮ ವಿರುದ್ಧವಾದ ಉಪಸಂಹಾರಕ್ಕೆ ತಂತ್ರನಿಂದೆಯಲ್ಲಿ ತಾತ್ಪರ್ಯವಿಲ್ಲವೆಂದುನ್ನು ವೇದಸ್ತುತಿಯಲ್ಲಿ ತಾತ್ಪರ್ಯವೆಂದುನ್ನು ಉಪಕ್ರಮಾಧಿ ಕರಣ ನ್ಯಾಯದಿಂದಲೂ ನಹಿನಿಂದಾ ನ್ಯಾಯದಿಂದಲೂ ಇದಕ್ಕೆ ಪ್ರಾಮಾಣ್ಯವನ್ನು ಹೇಳುವವರು ಹೇಳಬೇಕು.

ಮತ್ತು ಮಹಾಭಾರತ ವಿಷ್ಣುಪುರಾಣಗಳನ್ನು ಮತತ್ರಯ ಭಾಷ್ಯ

ಕಾರರು ಪ್ರಾಮಾಣ್ಯೇನ ಸ್ವೀಕರಿಸಿ ಉದಹರಿಸಿರುವರು. ಈ ಸೂತಸಂಹಿತೆಯ ಒಂದು ವಚನವನ್ನಾದರೂ ಒಬ್ಬ ಭಾಷ್ಯಕಾರರೂ ಉದಹರಿಸಲಿಲ್ಲಾ ಆದ್ದರಿಂದ ಅಂಥಾ ಸೂತ ಸಂಹಿತೆಯಿಂದ ದ್ವೈತವಿಶಿಷ್ಟಾದ್ವೈತಾದಿ ಭಾಷ್ಯಾಕಾರರುಗಳಿಂದ ಪ್ರಮಾಣತ್ವೇನ ಸ್ಥಾಪಿಸಲ್ಪಟ್ಟ ಮತ್ತು ಅದ್ವೈತಭಾಷ್ಯಕರರಿಂದಲೂ ಪಂಚಕಾಲಾರಾಧನಾ ದ್ಯನೇಕ ವಿಷಯಗಳಲ್ಲಿ ಪ್ರಮಾಣತ್ವೇನ ಅಂಗೀಕರಿಸಲ್ಪಟ್ಟ ಪಂಚರಾತ್ರಶಾಸ್ತ್ರಕ್ಕೆ ಅಪ್ರಾಮಾಣ್ಯಾದಿಗಳನ್ನ ಹೇಳಲು ಪಕ್ರಮಿಸಿದವರ ಸಾಹಸಕ್ಕೆ ದೃಷ್ಟಾಂತವೇ ದೊರಿಯಲಾರದು.

ಮತ್ತು ಈ ಸೂತಸಂಹಿತೆಯ ಪ್ರಾಮಾಣ್ಯ ವಿಷಯದಲ್ಲಿ ನಾವು ವಿಶೇಷವಾಗಿ ಹೇಳಲವಶ್ಯಕವಿಲ್ಲ. ಸ್ಮಾರ್ತರಲ್ಲಿಯೇ ಅನೇಕರು ಚೋಳದೇಶಾದಿಗಳಲ್ಲಿರುವವರು ಇದು ಕೃತ್ರಿಮವೆಂದುನ್ನು ಆದ್ದರಿಂದಲೇ ಶಂಕರಾಚಾರ್ಯರಿಂದ ಪ್ರಮಾಣತ್ವೇನ ಪರಿಗ್ರಹಿಸಲ್ಪಟ್ಟಿಲ್ಲವೆಂದುನ್ನು ಬಹುಕಾಲದಿಂದ ಉದ್ಘೋಷಿಸಿರುವರಲ್ಲದೆ ಈವಾಗಲೂ ತಿರುವಿಶನಲ್ಲೂರು ಶ್ರೀ|| ರಾಮಸುಬ್ಬಾಶಾಸ್ತ್ರಿಪ್ರಭೃತಿಗಳಾದ ಮಹಾಪಂಡಿತರುಗಳು ಈ ವಿಷಯವನ್ನು ಅನೇಕಯುಕ್ತಿಗಳೊಡನೆ ಸ್ಥಾಪಿಸಿ ಗ್ರಂಥಗಳನ್ನು ಮಾಡಿ ಮುದ್ರಿಸಿ ಸಕಲದೇಶಕ್ಕೂ ಕಳುಹಿಸಿ ಇರುವರು. ಈ ಸ್ಮಾರ್ತರಲ್ಲಿಯೇ ಹೀಗಿರುವಲ್ಲಿ ನಾವು ಉದಹರಿಸಿದ ಅನೇಕ ಪ್ರಮಾಣಗಳಿಗೆ ವಿರುದ್ಧವಾಗಿಯೂ ಉದಾಹೃತಕಲ್ಪತರು ಗ್ರಂಥವಿರುದ್ಧವಾಗಿಯೂ ಇರುವ ಸೂತಸಂಹಿತಾವಚನವನ್ನು ವೈಷ್ಣವರು ಪ್ರಮಾಣವೆಂದು ಒಪ್ಪುವದಕ್ಕೆ ಆದೀತೆ! ಆದ್ದರಿಂದಲೇ ಇಂಥಾ ಸೂತಸಂಹಿತಾವಚನಾವಲಂಬನದಿಂದ ಮುಂದೆ ಇವರು ಬರವಿರುವ ವಿಷಯವು ದೃಢವಾದ ಅಸ್ತಿಭಾರವಿಲ್ಲದೆ ಕಟ್ಟುವ ಕೋಟೆಯಂತೆ ಇರುವದು. ಆ ವಿಷಯವು ಯಾವದಂದರೆ—

" ಮತ್ತು ಸ್ಕಾಂದಪುರಾಣದಲ್ಲಿ ಸೂತಸಂಹಿತೆಯಲ್ಲಿ ಯಜ್ಞವೈಭವ ಖಂಡದ ಉತ್ತರಾರ್ಧದಲ್ಲಿ ೮ ನೇ ಅಧ್ಯಾಯದಲ್ಲಿ ೨೫ ನೇ ಶ್ಲೋಕ ಮೊದಲುಮಾಡಿಕೊಂಡು ;

ಶ್ರುತಿಪಥಗಳಿತಾನಾಂ ಮಾನುಷಾಣಾಂ ಹಿ ತಂತ್ರಂ ಪರಗುರುರಖಿಲೇ
ಶಸ್ಸರ್ವವಿತ್ಪ್ರಾಹ ಶಂಭುಃ । ಶ್ರುತಿಪಥನಿರತಾನಾಂ ತತ್ರನೈವಾಸ್ತಿ
ಕಿಂಚಿದ್ಧಿತಕರಮಿಹ ಸರ್ವಂ ಪುಷ್ಕಲಂ ಸತ್ಯಮುಕ್ತಂ । ಶ್ರುತಿರಪಿ
ಮನುಜಾನಾಂ ವರ್ಣಧರ್ಮಂ ಬಭಾಷೆ ಪರಗುರುರಖಿಲೇಶಃ ಪ್ರಾಹ ತಂ
ತ್ರೇಷು ತದ್ವತ್ । ಶ್ರುತಿಪಥಗಳಿತಾನಾಂ ವರ್ಣಧರ್ಮಂ ಘೃಣಾಬ್ಧಿಃ
ಶ್ರುತಿಪಥನಿರತಾನಾಂ ನೈವ ತತ್ಸೇವನೀಯಂ । ಶ್ರುತಿಪಥನಿರತಾನಾಂ
ಆಶ್ರಮಾ ಯದ್ವದುಕ್ತಾಃ ಪರಗುರುರಖಿಲೇಶಸ್ತದ್ವದಾಹಾಶ್ರಮಾಂ
ಶ್ಚ । ಶ್ರುತಿಪಥಗಳಿತಾನಾಂ ಮಾನುಷಾಣಾಂ ಹಿ ತಂತ್ರೈಃ ಹರಿರಪಿ
ಮುನಿಮುಖ್ಯೈಃ ಪ್ರಾಹತಂತ್ರೆ ಸ್ವಕೀಯೆ । ವಿಧಿರಪಿಮನುಜಾನಾಮಾ
ಹ ವರ್ಣಾಶ್ರಮಾಂಶ್ಚ ಶ್ರುತಿಪಥಗಳಿತಾನಾಮೇವ ತಂತ್ರೆ ಸ್ವಕೀಯೆ ।
ಶ್ರುತಿಪಥನಿರತಾನಾಂ ತೇನ ಸಂಸೇವನೀಯಾಃ ಶ್ರುತಿಪಥಸಮಮಾ
ರ್ಗೋ ನೈವ ಸತ್ಯಂ ಮಯೋಕ್ತಂ । ಹರಹರಿವಿಧಿಪೂಜಾಃ ಕೀರ್ತಿತಾ
ಸ್ಸರ್ವತಂತ್ರೈಃ ಶ್ರುತಿಪಥನಿರತಾನಾಂ ಯದ್ವದುಕ್ತಾ ತು ಪೂಜಾ ।
ಶ್ರುತಿಪಥಗಳಿತಾನಾಮೇವ ತಂತ್ರೋಕ್ತಪೂಜಾ ಶ್ರುತಿಪಥನಿರತಾನಾಂ
ಸರ್ವವೇದೋದಿತೈವ । ಶ್ರುತಿಪಥಗಳಿತಾನಾ ಮೇವ ತಂತ್ರೇಷುಲಿಂಗಂ
ಕಥಿತಮಖಿಲ ದುಃಖಧ್ವಂಸಕಂ ತತ್ರ ತತ್ರ ॥ ಶ್ರುತಿಪಥನಿರತಾನಾಂ
ತತ್ಸದಾ ನೈವಧಾರ್ಯಂ ಶ್ರುತಿರಪಿ ಮನುಜಾನಾ ಮಾಹಲಿಂಗಂ ವಿಶು
ದ್ಧಂ । ಶಿವಾಗಮೋಕ್ತಾಶ್ರಮನಿಷ್ಠಮಾನವಸ್ತ್ರಿಪುಂಡ್ರಲಿಂಗಂತು
ಸದೈವ ಧಾರಯೇತ್ । ತದುಕ್ತಮನ್ತ್ರೇಣ ಲಲಾಟಮಧ್ಯಮೆ ಮ
ಹಾದರೇಣೈವ ಸಿತೇನ ಭಸ್ಮನಾ । ವಿಷ್ಣ್ವಾಗಮೋಕ್ತಾಶ್ರಮನಿಷ್ಠ
ಮಾನವಸ್ತಥೈವಪುಣ್ಡ್ರಾನ್ತರಮೂರ್ಧ್ವರೂಪಕಂ । ತ್ರಿಶೂಲರೂ
ಪಂ ಚತುರಶ್ರಮೇವ ವಾ ಮೃದಾ ಲಲಾಟೇತುಸದೈವಧಾರಯೇತ್ ॥
ಅಜಾಗಮೋಕ್ತಾಶ್ರಮನಿಷ್ಠಮಾನವೊ ಲಲಾಟಮಧ್ಯೆಪಿ ಚ ವರ್ತು

ಲಾಕೃತಿಂ । ತದುಕ್ತಮನ್ತ್ರೇಣ ಸಿತೇನ ಭಸ್ಮನಾಪ್ಯಥವಾ ಚಂದನತಸ್ತು ಧಾರಯೇತ್ । ಅಶ್ವತ್ಥಪತ್ರ ಸದೃಶಂ ಹರಿಚಂದನೇನ ಮಧ್ಯೇ ಲಲಾಟಮತಿಶೋಭನಮಾದರೇಣ । ಬುದ್ಧ್ವಾಗಮೇ ಮುನಿವರಾ ಯದಿ ಸಂಸ್ಕೃತಶ್ಚೇನ್ಮೃದ್ವಾರಿಣಾ ಸತತಮೇವ ತು ಧಾರಯೇಚ್ಚ । ಊರ್ಧ್ವಪುಂಡ್ರತ್ರಯಂ ನಿತ್ಯಂ ಧಾರಯೇದ್ಭಸ್ಮನಾಪ್ಯಥಾ । ಲಲಾಟೇ ಹ್ಯಾಗಮೇನಿಷ್ಠ ಶ್ಚಂದನೇನಾಥವಾನರಃ । ಸಿತೇನ ಭಸ್ಮನಾ ತಿರ್ಯಕ್ತ್ರಿಪುಂಡ್ರಸ್ಯ ಚ ಧಾರಣಂ । ಸರ್ವಾಗಮೇಷು ನಿಷ್ಠಾನಾಂ ತತ್ತನ್ಮಂತ್ರೇಣ ಶೋಭನಂ । ಶಿವಾಗಮೇಷು ನಿಷ್ಠಾನಾಂ ಧಾರ್ಯಂ ತಿರ್ಯಕ್ತ್ರಿಪುಂಡ್ರಕಂ । ಏಕಮೇವ ಸದಾಭೂತ್ಯಾ ನ್ಯೈವ ಪುಂಡ್ರಾಂತರಂ ಬುಧಾಃ । ವೇದಮಾರ್ಗೈಕನಿಷ್ಠಾನಾಂ ವೇದೋಕ್ತೇನೈವ ವರ್ತ್ಮನಾ । ಲಲಾಟೇ ಭಸ್ಮನಾ ತಿರ್ಯಕ್ತ್ರಿಪುಂಡ್ರಂ ಧಾರ್ಯಮೇವಹಿ । ಲಲಾಟೇ ಭಸ್ಮನಾ ತಿರ್ಯಕ್ತ್ರಿಪುಂಡ್ರಸ್ಯ ಚ ಧಾರಣಂ ।

ವಿನಾಪುಂಡ್ರಾಂತರಂ ಮೋಹಾದ್ಧಾರಯನ್ಪತತಿ ದ್ವಿಜಃ ।
ವಿಷ್ಣ್ವಾಗಮಾದಿ ತಂತ್ರೇಷು ದೀಕ್ಷಿತಾನಾಂ ವಿಧೀಯತೇ ।
ಶಂಖಚಕ್ರಗದಾಪೂರ್ವೈ ರಂಕನಂ ನಾನ್ಯದೇಹಿನಾಂ ।
ದೀಕ್ಷಿತಾನಾಂ ತು ತಂತ್ರೇಷು ನರಾಣಾಮಂಕನಂ ದ್ವಿಜಾಃ ।
ಉಪಕಾರಕಮೇವೋಕ್ತಂ ಕ್ರಮೇಣ ಮುನಿಪುಂಗವಾಃ ।
ಪುಂಡ್ರಾಂತರಸ್ಯ ತಂತ್ರೇಷು ಧಾರಣಂ ದೀಕ್ಷಿತಸ್ಯ ತು ।
ಉಪಕಾರಕಮೇವೋಕ್ತಂ ಕ್ರಮೇಣ ಮುನಿಪುಂಗವಾಃ ।
ವೇದಮಾರ್ಗೈಕನಿಷ್ಠಸ್ತು ಮೋಹೇನಾಪ್ಯಂಕಿತೋಯದಿ ।
ಪತತ್ಯೇವ ನ ಸಂದೇಹಃ ತಥಾ ಪುಂಡ್ರಾಂತರಾದಪಿ ।
ನಾಂಕನಂವಿಗ್ರಹೇ ಕುರ್ಯಾದ್ವೇದಪಂಥಾನಮಾಶ್ರಿತಃ ।
ಪುಂಡ್ರಾಂತರಂ ಭ್ರಮಾದ್ವಾಪಿ ಲಲಾಟೇ ನೈವಧಾರಯೇತ್ ।

ತಂತ್ರೋಕ್ತೇನ ಪ್ರಕಾರೇಣ ದೇವತಾ ಯಾಪ್ರತಿಷ್ಠಿತಾ |
ಸಾಪಿವಂದ್ಯಾ ಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ |
ಶುದ್ಧಮೇವಹಿ ಸರ್ವತ್ರ ದೇವತಾರೂಪವನಾಸ್ತಿಕಾಃ |
ತತ್ತತ್ತಂತ್ರೋಕ್ತಪೂಜಾತು ತಂತ್ರನಿಷ್ಠಸ್ಯಕೇವಲಂ |
ತಂತ್ರೇಷು ದೀಕ್ಷಿತೋಮರ್ತ್ಯೋ ವೈದಿಕಂ ನಸ್ಪೃಶೇತ್ಸದಾ |
ವೈದಿಕಶ್ಚಾಪಿ ತಂತ್ರೇಷು ದೀಕ್ಷಿತಂ ನಸ್ಪೃಶೇತ್ಸದಾ |
ರಾಜಾತು ವೈದಿಕಾನ್ಸರ್ವಾನ್ ತಾಂತ್ರಿಕಾನಖಿಲಾನಪಿ |
ಅಸಂಕೀರ್ಣತಯಾನಿತ್ಯಂ ಸ್ಥಾಪಯೇನ್ಮತಿಮತ್ತಮಃ |
ಅನ್ನಪಾನಾದಿಭಿರ್ವಸ್ತ್ರೈ ಸ್ಸರ್ವಾನ್ ರಾಜಾಭಿರಕ್ಷಯೇತ್ |
ವೈದಿಕಾಂಸ್ತು ವಿಶೇಷೇಣ ಜ್ಞಾನಿನಸ್ತು ವಿಶೇಷತಃ |
ಮಹಾದೇವಸಮೋದೇವೋ ಯಥಾನಾಸ್ತಿಶ್ರುತೌಸ್ಮೃತೌ |
ತಥಾವೈದಿಕತುಲ್ಯಸ್ತು ನಾಸ್ತಿತಂತ್ರಾವಲಂಬಿಷು |
ಯಥಾವಾರಾಣಸೀತುಲ್ಯಾ ಪುರೀನಾಸ್ತಿ ಶ್ರುತೌಸ್ಮೃತೌ |
ತಥಾವೈದಿಕತುಲ್ಯಂತು ನಾಸ್ತಿತಂತ್ರಾವಲಂಬಿಷು |
ಷಡಕ್ಷರಸಮೋಮಂತ್ರೋ ಯಥಾನಾಸ್ತಿ ಶ್ರುತೌಸ್ಮೃತೌ |
ತಥಾವೈದಿಕತುಲ್ಯಸ್ತು ನಾಸ್ತಿತಂತ್ರಾವಲಂಬಿಷು |
ಯಥಾಭಾಗೀರಥೀತುಲ್ಯಾ ನದೀನಾಸ್ತಿಶ್ರುತೌಸ್ಮೃತೌ |
ತಥಾವೈದಿಕತುಲ್ಯಸ್ತು ನಾಸ್ತಿತಂತ್ರಾವಲಂಬಿಷು |
ಓದನೇನಸಮಂಭೋಜ್ಯಂ ಯಥಾಲೋಕೇನವಿದ್ಯತೇ |
ತಥಾವೈದಿಕತುಲ್ಯಸ್ತು ನಾಸ್ತಿತಂತ್ರಾವಲಂಬಿಷು |
ದೇವದೇವೋ ಮಹಾದೇವೋ ಯಥಾಸರ್ವೈಃ ಪ್ರಪೂಜ್ಯತೇ |
ತಥೈವವೈದಿಕೋಮರ್ತ್ಯಃ ಪೂಜ್ಯಸ್ಸರ್ವಜನೈರಪಿ |
ಆದಿತ್ಯೇನವಿಹೀನಂತು ಜಗದಂಧಂ ಯಥಾಭವೇತ್ |

ತಥಾವೈದಿಕಹೀನಂತು ಜಗದಂಧಂ ನಸಂಶಯಃ |
ಪ್ರಾಣೇಂದ್ರಿಯಾದಿಹೀನಂತು ಶರೀರಂ ಕುಣಪಂಯಥಾ |
ತಥಾವೈದಿಕಹೀನಂತು ಜಗದ್ವ್ಯರ್ಥಂ ನ ಸಂಶಯಃ |
ಅಹೋವೈದಿಕಮಾಹಾತ್ಮ್ಯಂ ಮಯಾವಕ್ತುಂನಶಕ್ಯತೆ |
ವೇದಏವತುಮಾಹಾತ್ಮ್ಯಂ ವೈದಿಕಸ್ಯಾಬ್ರುವೀನ್ಮುದಾ |
ಸ್ಮೃತಯಶ್ಚ ಪುರಾಣಾನಿ ಭಾರತಾದೀನಿಸುವ್ರತಾಃ |
ವೈದಿಕಸ್ಯತು ಮಾಹಾತ್ಮ್ಯಂ ಪ್ರವದಂತಿ ಸದಾಮುದಾ |
ವೇದೋಕ್ತಂ ತಾಂತ್ರಿಕಾಸ್ಸರ್ವೆ ಸ್ವೀಕುರ್ವನ್ತಿ ದ್ವಿಜರ್ಷಭಾಃ |
ನೋಪಜೀವನ್ತಿ ತಂತ್ರೋಕ್ತಂ ವೇದಸಾಕ್ಷಾತ್ಸನಾತನಃ |

ಈ ವಚನಗಳಿಂದ ವೈಖಾನಸ, ಪಾಂಚರಾತ್ರ, ಶೈವ, ಪಾಶುಪತಾದ್ಯಾಗಮಗಳು ವೇದಮಾರ್ಗದಿಂದ ತಪ್ಪಿಹೋದವನ ಪರಗಳೆಂದುನ್ನು ಈ ತಂತ್ರಗಳಲ್ಲಿ ಹೇಳಿರುವ ವರ್ಣಾಶ್ರಮಧರ್ಮಗಳು ಪುಂಡ್ರಧಾರಣವು ಲಾಂಛನಧಾರಣವು ತಂತ್ರೋಕ್ತಪ್ರಕಾರ ಪೂಜೆಮಾಡೋಣವೆ ಮೊದಲಾದವು ವೇದೋಕ್ತಮಾರ್ಗದಿಂದ ತಪ್ಪಿಹೋದವನಪರಗಳೆಂದುನ್ನು ವೇದೋಕ್ತಮಾರ್ಗಾನುವರ್ತಿಗಳಾದ ವೈದಿಕರು ತಂತ್ರೋಕ್ತಮಾರ್ಗವನ್ನನುಸರಿಸಕೂಡದೆಂದುನ್ನು ತಾಂತ್ರಿಕರು ಮಾತ್ರ ವೇದೋಕ್ತಮಾರ್ಗವನ್ನು ಅನುಸರಿಸಬೇಕು. ತಾಂತ್ರಿಕರು ವೈದಿಕರು ಇವರುಗಳಲ್ಲಿ ವೈದಿಕರೇ ಶ್ರೇಷ್ಠರೆಂತಲೂ, ವೇದನೇ ಮುಖ್ಯಪ್ರಮಾಣವೆಂದು ದೃಢೀಕರಿಸಲ್ಪಟ್ಟಿರುವದ್ದರಿಂದ ಪಂಚರಾತ್ರಾದಿ ತಂತ್ರಗಳಲ್ಲಿರುವ ವಚನಗಳು ವೇದಮಾರ್ಗದಿಂದ ತಪ್ಪಿಹೋಗಿರುವನ ವಿಷಯದಲ್ಲಿ ಪ್ರಮಾಣವಾಗಿ ಬರಿಯಲ್ಪಡಬಹುದೇಹೊರ್ತು ವೇದಮಾರ್ಗಾನುಸಾರಿಗಳ ವಿಷಯದಲ್ಲಿ ಬರಿಯಲ್ಪಡುವದಕ್ಕೆ ಅವಕಾಶವು ಇಲ್ಲಾ ಈ ತಂತ್ರವಚನಗಳು ವೈದಿಕರ ಆಚಾರವನ್ನು ಎಂದಿಗೂ ಬಾಧಿಸಲಾರವು" ] ಎಂದು ಬರದಿರುತ್ತಾರೆ. ಉದಾಹೃತಮಹಾಭಾರತ ಭಾಗವತ ಗರುಡ ಪುರಾ

ಣಾದಿಗಳಲ್ಲಿ ಶ್ರೀಪಾಂಚರಾತ್ರಾಗಮವು ಸರ್ವಜ್ಞನಾದ ಭಗವಂತನಿಂದ ವೈದಿಕೋತ್ತಮರಿಗೆ ಹಿತಾರ್ಥವಾಗಿ ಪ್ರಚಾರಮಾಡಲ್ಪಟ್ಟಿರುವದೆಂತಲೂ ಮಹರ್ಷಿಗಳಿಂದ ಪರಿಗ್ರಹೀತಗಳೆಂತಲೂ ಚತುರ್ವೇದಾರ್ಥಸಮನ್ವಿತವೆಂತಲೂ ವೇದವಿರೋಧಲೇಶವಿಲ್ಲವೆಂತಲೂ ಶ್ರೀಪಂಚರಾತ್ರಾಗಮವಿರುದ್ಧವಾದವೆಲ್ಲ ಅಸಚ್ಛಾಸ್ತ್ರಗಳೆಂತಲೂ ಅಸಾತ್ವಿಕಗಳೆಂತಲೂ ವೇದತಂತ್ರಗಳಿಗೆ ಸಮುಚ್ಚಯದಿಂ ಪೂಜಾದಿವಿಧಾನವಂ ನಡಿಸಬೇಕೆಂದುನ್ನು ಸ್ಪಷ್ಟವಾಗಿರುವ ಭಾಗಗಳು ಪೂರ್ವದಲ್ಲಿಯೆ ಉದಾಹರಿಸಲ್ಪಟ್ಟಿರುತ್ತವೆ ಆದ್ದರಿಂದ ಅಂಥಾ ಅನೇಕ ಪ್ರಮಾಣಗಳಿಂದ ಬಾಧಿತವಾದ ಸೂತಸಂಹಿತಾಭಾಗವು ವೈದಿಕೋತ್ತಮರಿಗೆ ಎಂದಿಗೂ ಪ್ರಮಾಣವಾಗಲಾರದು ಸೂತಸಂಹಿತೆಯು ತಾಮಸಪುರಾಣಾಂತರ್ಗತವಾಗಿರುವದರಿಂದಲೂ ತಾಮಸಪುರಾಣಗಳು ತಾಮಸರಾದ ವೇದಬಾಹ್ಯರಿಗೆ ಮಾತ್ರ ಪ್ರಮಾಣವೆಂದು ಪೂರ್ವದಲ್ಲಿಯೇ ನಿರೂಪಿಸಲ್ಪಟ್ಟಿರುವದರಿಂದ ಸೂತಸಂಹಿತಾವಚನವನ್ನು ವೈದಿಕರಾದ ಪಂಚರಾತ್ರಾನುಸಾರಿಗಳನ್ನು ಕುರಿತು ಪ್ರಮಾಣವಾಗಿ ಬರದಿರುವದು ಅತ್ಯಂತಾಸಂಗತವು.

ಮತ್ತು “ತಾಂತ್ರಿಕರು ವೈದಿಕರು ಇವರುಗಳಲ್ಲಿ ವೈದಿಕರೇ ಶ್ರೇಷ್ಠರೆಂತಲೂ ವೇದವೇ ಮುಖ್ಯಪ್ರಮಾಣವೆಂತಲೂ” ಇವರು ಹೇಳುವದರಲ್ಲಿ ಸ್ವಲ್ಪ ವಿಚಾರಿಸಬೇಕಾಗಿರುವದು ಏನಂದರೆ—

ವೈದಿಕರೆಂಬುವರು ಯಾರು ? ವೇದೋಕ್ತಕರ್ಮವನ್ನುಮಾತ್ರ ಅನುಷ್ಠಿಸುವರು ಎಂದು ಹೇಳುವಿರೊ ಅದು ಅಸಂಗತವು

ಬ್ರಾಹ್ಮಣರೆಲ್ಲರೂ ಪ್ರತಿದಿನವೂ ಮಾಡುತ್ತಿರುವ ಆಚಮನಾದಿ ಕರ್ಮಗಳು ಯಾವ ಶ್ರುತಿಯಲ್ಲಿಯು ಹೇಳಲ್ಪಡಲಿಲ್ಲ. ಅವುಗಳು ಸ್ಮೃತಿಗಳಲ್ಲಿಯೂ ಪುರಾಣಗಳಲ್ಲಿಯೂ ಹೇಳಲ್ಪಟ್ಟಿರುತ್ತವೆ. ಆದ್ದರಿಂದ ಬ್ರಾಹ್ಮಣರಲ್ಲಿ ಯಾರೂ ವೇದೋಕ್ತಕರ್ಮವನ್ನುಮಾತ್ರ ಅನುಷ್ಠಿಸುವರಲ್ಲವಾದಕಾರಣ

ಬ್ರಾಹ್ಮಣರಲ್ಲಿ ಯಾರೂ ವೈದಿಕರೆನ್ನಿಸಿಕೊಳ್ಳುವದಕ್ಕೆ ಆಗುವದಿಲ್ಲವಾಗಿ ಬರುವದು. ವೇದ ಮತ್ತು ವೇದಾವಿರುದ್ಧಪ್ರಮಾಣ ಅಥವಾ ವೇದಮೂಲಕಪ್ರಮಾಣ ಇವುಗಳಲ್ಲಿ ಉಕ್ತಕರ್ಮವನ್ನುಮಾತ್ರ ಅನುಷ್ಠಿಸುವರು ವೈದಿಕರೆಂದು ಹೇಳುವಿರೊ ? ಹಾಗಾದರೆ ಶ್ರೀ ಪಂಚರಾತ್ರ ಶಾಸ್ತ್ರಕ್ಕೆ ವೇದವಿರೋಧಲೇಶವೂ ಇಲ್ಲವೆಂಬವಿಷಯದಲ್ಲಿ ಪೂರ್ವದಲ್ಲಿಯೆ ಪ್ರಮಾಣಗಳು ಉದಾಹರಿಸಲ್ಪಟ್ಟಿರುವದರಿಂದಲೂ ಪಂಚರಾತ್ರಕ್ಕೆ "ಶ್ರುತಿಮೂಲಮಿದಂತಂತ್ರಂ" ಇತ್ಯಾದಿ ವಚನಗಳಿಂದ ವೇದಮೂಲಕತ್ವವು ಹೇಳಲ್ಪಟ್ಟಿರುವದರಿಂದಲೂ ಭಗವದಾರಾಧನೋಪದೇಶಾರ್ಥವಾದ ಪಂಚರಾತ್ರ ಶಾಸ್ತ್ರವನ್ನು ಅನುಸರಿಸಿ ತದುಕ್ತ ಭಗವದಾರಾಧನವನ್ನು ವೇದೋಕ್ತವಾದ ಕರ್ಮಗಳನ್ನುಸಹಾ ಅನುಷ್ಠಿಸುತ್ತಲಿರುವ ವೈಷ್ಣವರು ವೈದಿಕರೆನ್ನಿಸಿಕೊಳ್ಳುವರೆಹೊರತು ಇತರರು ವೈದಿಕರೆನ್ನಿಸಿಕೊಳ್ಳಲಾರರು ಯಾಕಂದರೆ—ಭಗವದಾರಾಧನವು ವೈದಿಕರಿಗೆ ನಿತ್ಯಕರ್ಮಗಳಲ್ಲಿ ಒಂದಾಗಿರುವದೆಂದು ಎಲ್ಲರೂ ಒಪ್ಪುವರು. ಅದು ಅಭಿಗಮನೋಪಾದನೇಜ್ಯಾಸ್ವಾಧ್ಯಾಯಯೋಗ ರೂಪವಾದ ಪಾಂಚಕಾಲಿಕಕ್ರಮವಾದರೆ ಮೋಕ್ಷಹೇತುವಾಗುವದೆಂಬ ವಿಷಯವನ್ನು ಶ್ರೀ ಶಂಕರಾಚಾರ್ಯರುಸಹ ಒಪ್ಪಿಕೊಂಡಿರುವರು. ಇಂಥಾ ಪಾಂಚಕಾಲಿಕ ಭಗವದಾರಾಧನವಿಧಾನವು ಪಂಚರಾತ್ರಾಗಮದಲ್ಲಿ ಸಮಗ್ರವಾಗಿ ಹೇಳಿರುವದೇಹೊರತು ಇತರಸ್ಥಲದಲ್ಲಿ ಹೇಳಲ್ಪಡಲಿಲ್ಲ ಸ್ವಲ್ಪಮಟ್ಟಿಗೆ ಕೆಲವುಸ್ಮೃತಿಗಳಲ್ಲಿಯು ಪುರಾಣಗಳಲ್ಲಿಯೂ ಹೇಳಲ್ಪಟ್ಟಿದ್ದರೂ ಅದು ಅನುವಾದರೂಪವಾಗಿ ಶ್ರೀ ಪಂಚರಾತ್ರಕ್ಕೆ ಶೇಷರೂಪವಾಗಿರುವದು. ಹೌತ್ರವೆಂಬ ಋತ್ವಿಕ್ಕರ್ಮವು ಅಧ್ವರ್ಯುಸೂತ್ರವೆಂಬ ಆಪಸ್ತಂಬಾದಿ ಸೂತ್ರಗಳಲ್ಲಿ ಹೇಳಲ್ಪಟ್ಟಿದ್ದರೂ ಅವುಗಳಲ್ಲಿ ಪೂರ್ಣವಾಗಿಲ್ಲದಕಾರಣ ಹೌತ್ರಕರ್ಮವಿಷಯದಲ್ಲಿ ಹೋತೃಶಾಖೆಯು ಅಂದರೆ ಋಗ್ವೇದವೆ ಮುಖ್ಯ ಪ್ರಮಾಣವೆಂದುನ್ನು ಆಧ್ವರ್ಯವವೆಂಬ ಋತ್ವಿಕ್ಕರ್ಮವು ಹೋತೃಸೂತ್ರಗಳಲ್ಲಿ

ಸ್ವಲ್ಪಮಟ್ಟಿಗೆ ಹೇಳಲ್ಪಟ್ಟಿದ್ದರೂ ಆಧ್ವರ್ಯವವಿಷಯದಲ್ಲಿ ಯಜುರ್ವೇದವೆ ಮುಖ್ಯಪ್ರಮಾಣವೆಂದುನ್ನು ಕಲ್ಪಸೂತ್ರವ್ಯಾಖ್ಯಾಕಾರರು ಸಿದ್ಧಾಂತಿಸಿರುವರು. ಅದೇರೀತಿಯಾಗಿ ಭಗವದಾರಾಧನವಿಷಯದಲ್ಲಿ ಶ್ರೀ ಪಂಚರಾತ್ರವೆ ಮುಖ್ಯಪ್ರಮಾಣವಾಗಿರುವದ್ದರಿಂದ ತದನುಸಾರಿಯಾಗಿ ನಿತ್ಯಕರ್ಮವಾದ ಪಾಂಚಕಾಲಿಕಭಗವದಾರಾಧನವನ್ನು ಮಾಡುವ ವೈಷ್ಣವರೆ ವೈದಿಕಶಬ್ದಕ್ಕೆ ಮುಖ್ಯಾರ್ಥವಾಗಿರುವರು

ಆದ್ದರಿಂದ ವೈದಿಕರು ತಾಂತ್ರಿಕರು ಎಂದು ವಿಭಾಗದಿಂ ಹೇಳುವ ಸ್ಥಳದಲ್ಲಿ ವೇದವಿರುದ್ಧತಂತ್ರಾವಲಂಬಿಗಳೇ ತಾಂತ್ರಿಕಪದಕ್ಕೆ ಅರ್ಥವೆಂದು ಹೇಳಬೇಕಾಗಿರುವದು. ಹಾಗಾದರೆ, ವೇದವಿರುದ್ಧ ತಂತ್ರಾವಲಂಬಿಗಳೆಂಬುವ ತಾಂತ್ರಿಕರಿಗಿಂತಲೂ ಮೇಲೆ ಹೇಳಲ್ಪಟ್ಟ ವೈದಿಕರು ಶ್ರೇಷ್ಠರೆಂಬುವ ವಿಷಯದಲ್ಲಿ ಯಾರಿಗೂ ವಿಪ್ರತಿಪತ್ತಿ ಇಲ್ಲ. ಮತ್ತು ಆಗಮಶಾಸ್ತ್ರದಲ್ಲಿಯೆ

ವೈದಿಕಂ ತಾಂತ್ರಿಕಂ ಚೈವ ತಥಾ ವೈದಿಕತಾಂತ್ರಿಕಂ।

ಎಂದು ಮೂರು ವಿಧವಾಗಿ ಕರ್ಮವನ್ನು ವಿಭಾಗಿಸಿ ವೇದಮಂತ್ರಗಳಿಂದ ಮಾತ್ರ ಮಾಡುವ ಕರ್ಮವು ವೈದಿಕಕರ್ಮವೆಂದುನ್ನು ವೇದಮನ್ತ್ರ ತಂತ್ರ ಮಂತ್ರ ಇವೆರಡೂಸೇರಿಸಿ ನಡಿಸುವ ಕರ್ಮವು ವೈದಿಕತಾಂತ್ರಿಕವೆಂದುನ್ನು ಕೇವಲ ತಂತ್ರಮಂತ್ರದಿಂದಲೆ ಮಾಡುವ ಕರ್ಮವು ತಾಂತ್ರಿಕವೆಂದುನ್ನು ವ್ಯವಸ್ಥೆಮಾಡಲ್ಪಟ್ಟಿರುವದು. ಮೂರನೆಯದಾದ ತಾಂತ್ರಿಕಪೂಜಾದಿ ಕರ್ಮಗಳಲ್ಲಿ ವೇದಾನಧಿಕಾರಿಗಳಾದ ಸ್ತ್ರೀಶೂದ್ರಾದಿಗಳಿಗೆ ಅಧಿಕಾರವೆಂದುನ್ನು ನಿರೂಪಿಸಲ್ಪಟ್ಟಿರುವದು ಆದ್ದರಿಂದ ತಾಂತ್ರಿಕನಿಂದಾಪರವಚನಗಳು ಸ್ವಯಂವೇದಾಧಿಕಾರಿಗಳಾಗಿ ಶುದ್ಧತಾಂತ್ರಿಕ ಕ್ರಮವನ್ನು ಅವಲಂಬಿಸಿರುವವರ ವಿಷಯಗಳೆಂದೇ ಶಾಸ್ತ್ರಜ್ಞರು ನಿರ್ಣಯಿಸಿರುವರು.

ಆದ್ದರಿಂದ ವೇದಾವಿರುದ್ಧವಾದ ಪ್ರಮಾಣತೆಯನಾದ ಪಂಚರಾತ್ರ ತಂತ್ರದಲ್ಲಿರುವ ವಚನಗಳು ವೈದಿಕರೆಂದು ಇವರು ತಿಳಿದುಕೊಂಡಿರುವವರು ದುರಾಗ್ರಹದಿಂ ಮಾಡುವ ಪಂಚರಾತ್ರಾನುಸಾರಿದೇವಾಲಯದಲ್ಲಿ ಗರ್ಭಗೃಹಪ್ರವೇಶಾದಿ ದುರಾಚಾರಗಳನ್ನು ಬಾಧಿಸದೆ ಇರಲಾರದು.

ಹೀಗಿರುವದ್ದರಿಂದ ಇವರು ಸೂತಸಂಹಿತಾವಚನವನ್ನು ಆಧಾರವಾಗಿ ಅವಲಂಬಿಸಿ ವಿಷಯವನ್ನು ಬರದಿರುವದು ದೊಡ್ಡ ಅಗಾಧವಾದ ಕೆರೆಯನ್ನು ಅಸ್ತಿಭಾರವೆಂದು ಅವಲಂಬಿಸಿ ಕೋಟೆಕಟ್ಟುವದಕ್ಕೆ ಉದ್ಯೋಗಿಸಿದಂತೆ ಇರುವದು ಆದ್ದರಿಂಪಲೆ

[" ಮತ್ತು ಈ ವಚನಗಳಲ್ಲಿ—

ತಂತ್ರೋಕ್ತೇನ ಪ್ರಕಾರೇಣ ದೇವತಾಯಾ ಪ್ರತಿಷ್ಠಿತಾ ।
ಸಾಪಿ ವಂದ್ಯಾ ಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ ।
ಶುದ್ಧಮೇವ ಹಿ ಸರ್ವತ್ರ ದೇವತಾರೂಪಮಾಸ್ತಿಕಾಃ ।
ತತ್ತತ್ತಂತ್ರೋಕ್ತಪೂಜಾತು ತಂತ್ರನಿಷ್ಠಸ್ಯ ಕೇವಲಂ ।

ಎಂಬದಾಗಿರುವದ್ದರಿಂದ ಶ್ರೀರಂಗನಾಥದೇವರು ಆಗಮೋಕ್ತರಿತ್ಯಾ ಪ್ರತಿಷ್ಠಿತರೆಂದು ಒಂದು ವೇಳೆ ದಾಕ್ಷಿಣ್ಯಕ್ಕೆ ಒಪ್ಪಿಕೊಂಡಾಗ್ಯೂ ಪಾಂಚರಾತ್ರಾದ್ಯಾಗಮ ಮಾರ್ಗದಿಂದ ಪೂಜಿಸಲ್ಪಡುತ್ತಿದೆ ಎಂದು ಹೇಳಿದಾಗ್ಯೂ ವೇದಮಾರ್ಗನಿಷ್ಠರಾದವರು ಇಂಥಾ ದೇವರನ್ನೂ ಪೂಜೆಮಾಡಬೇಕೆಂದು ಈ ವಚನಗಳು ಹೇಳುವದ್ದರಿಂದ ವೈದಿಕಶಿರೋಮಣಿಗಳಾದ ಜಗದ್ಗುರುಗಳವರು ಈ ದೇವರನ್ನು ಅರ್ಚಿಸಬಾರದೆಂದು ಹೇಳುವದಕ್ಕೆ ಶ್ರೀವೈಷ್ಣವ ಮಹಾಜನರ ಪ್ರೊಸಿಡಿಂಗ್ಸಿನಲ್ಲಿ ಉದಹರಿಸಲ್ಪಟ್ಟ ವಚನಗಳು ಶಕ್ತಿಉಳ್ಳದ್ದಲ್ಲವು "] ಎಂದು ಅನೇಕ ಪ್ರಮಾಣವಿರುದ್ಧವಾದ ಸೂತಸಂಹಿತಾ ವಚನಗಳಿಂದ ಪಂಚರಾತ್ರಾನುಸಾರಿ ದೇವಸ್ಥಾನಗಳಲ್ಲಿ ಶ್ರೀ ಶೃಂಗೇರಿಸ್ವಾಮಿಗಳು ಪೂಜೆಮಾಡುವದು ಯುಕ್ತವೆಂದು ಸಾಧಿಸು

ವದು ಸೈತಕಸೇತುವಿನಿಂದ ಇಚ್ಛ್ಯಯಿಸಿದ ಗಂಗಾಪ್ರವಾಹನಿರೋಧಸಾಧನ ದಂತೆ ಇರುವದು.

'ತಂತ್ರೋಕ್ತೇನ ಪ್ರಕಾರೇಣ ದೇವತಾಯಾ ಪ್ರತಿಷ್ಠಿತಾ' ಎನ್ನುವ ಮೇಲೆ ಬರದಿರುವ ವಚನವನ್ನು ಪ್ರಮಾಣವೆಂದು ಒಪ್ಪಿಕೊಂಡರೂ ಇದರಿಂದ ಇವರಿಗೆ ಯಾವ ಇಷ್ಟವೂ ಸಿದ್ಧಿಸಲಾರದು ಹ್ಯಾಗಂದರೆ,

“ಅಹರಹಸ್ಸಂಧ್ಯಾಮುಪಾಸೀತ” ಇತ್ಯಾದಿಗಳಂತೆ “ಸಾಪಿ ಸಂಧ್ಯಾಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ” ಎನ್ನುವ ವಚನವು ವೈದಿಕರು ಪೂಜೆಯನ್ನು ಅವಶ್ಯಕವಾಗಿ ಮಾಡಲೇಬೇಕು ಎಂದು ಅರ್ಥಹೇಳಿ ನಿತ್ಯಚೋದನಾರೂಪತ್ವವನ್ನು ಸ್ವೀಕರಿಸುವದಕ್ಕೆ ನಿತ್ಯತಾಗ್ರಾಹಕವಾದ ಮೀಮಾಂಸಕೋಕ್ತವಾದ ವೀಪ್ಸಾದಿಗಳು ಇಲ್ಲದ ಕಾರಣ ಆಗಲಾರದು. “ಉಪರಾಗೇ ಸ್ನಾಯಾತ್” ಇತ್ಯಾದಿಗಳಂತೆ ನಿಮಿತ್ತತ್ವಬೋಧಕಪದವಿಲ್ಲದಕಾರಣ ನೈಮಿತ್ತಿಕವಿಧಿ ಎಂದು ಹೇಳುವದಕ್ಕೆ ಆಗಲಾರದು. ಕಾಮ್ಯಬೋಧಕಪದವಿಲ್ಲದಕಾರಣ ಕಾಮ್ಯವಿಧಿ ಎಂದು ಹೇಳುವದಕ್ಕೆ ಆಗಲಾರದು. ಕಾಮ್ಯವಿಧಿ ಎಂದು ಒಪ್ಪಿದರೂ ಸನ್ಯಾಸಿಗಳಿಗೆ ಕಾಮ್ಯಕರ್ಮಾಧಿಕಾರವಿಲ್ಲದಕಾರಣ ಶೃಂಗೇರಿಸ್ವಾಮಿಗಳು ಮಾಡುವ ಪೂಜೆಗೆ ಇದು ಪ್ರಮಾಣವಾಗಲಾರದು. ಆದ್ದರಿಂದ ಪೂಜನೀಯಾ ಎಂಬುವ ಪದದಲ್ಲಿರುವ ಅನೀಯರ್ ಪ್ರತ್ಯಯಕ್ಕೆ ವಿಧ್ಯರ್ಥಕತ್ವವನ್ನು ಸ್ವೀಕಾರಮಾಡದೆ ಅರ್ಹಾರ್ಥಕತ್ವವನ್ನು ಸ್ವೀಕರಿಸಬೇಕು ಹಾಗುದರೆ ತಂತ್ರಪ್ರತಿಷ್ಠಿತ ದೇವರನ್ನು ವೈದಿಕರು ಪೂಜಿಸಿದರೆ ಪೂಜಿಸಬಹುದು ಎಂದರ್ಥವಾಗುವದು. ಹಾಗಾಗುವಪಕ್ಷದಲ್ಲಿ ಯಾವತಂತ್ರದಲ್ಲಿ ಅದೀಕ್ಷಿತರು ಪೂಜೆ ಮಾಡಿದರೆ ನಿಷೇಧವು ಹೇಳಲ್ಪಡಲಿಲ್ಲವೋ ಅಂಥಾ ತಂತ್ರದಿಂದ ಪ್ರತಿಷ್ಠಿತ ದೇವರನ್ನು ವೈದಿಕರು ಪೂಜಿಸಬಹುದು ಎಂದು ಅರ್ಥವಾಗುವದೇವಿನಾ ಪಂಚರಾತ್ರ ನಿಷೇಧ

ವಚನಗಳನ್ನು ಅತಿಕ್ರಮಿಸಿ ಪಂಚರಾತ್ರಾನುಸಾರಿಸ್ಥಲದಲ್ಲಿ ಶೃಂಗೇರೀಸ್ವಾಮಿಗಳೇ ಮೊದಲಾದ ಆದೀಕ್ಷಿತರು ಪೂಜೆಯನ್ನು ಮಾಡಬೇಕೆಂದು ಅರ್ಥವಾಗಲಾರದು ಮತ್ತು ತಂತ್ರಗಳು ಕೆಲವು ವೇದಮಾರ್ಗವಿರುದ್ಧಗಳೆಂದು ಈ ವಚನಕಿಂತಲೂ ಪೂರ್ವದಲ್ಲಿ ಪ್ರಸಕ್ತವಾಗಿರುವದ್ದರಿಂದ ವೇದವಿರುದ್ಧತಂತ್ರಪ್ರತಿಷ್ಠಿತವಾದ ದೇವರಿಗೆ ವೇದಮಾರ್ಗಾನುಸಾರಿಗಳು ವಂದನಾದಿಗಳನ್ನು ಮಾಡಿದರೆ ವೇದವಿರೋಧಿಮಾರ್ಗಾನುಸಾರಪ್ರಯುಕ್ತವಾದ ಪ್ರತ್ಯವಾಯವು ಬರಬಹುದು ಎಂಬ ಶಂಕೆಯನ್ನು ಹೋಗಲಾಡಿಸುವದಕ್ಕಾಗಿ ವೇದವಿರುದ್ಧತಂತ್ರಪ್ರತಿಷ್ಠಿತರಾದಾಗ್ಯೂ ಅಂಥಾ ದೇವರಿಗೆ ವೇದಮಾರ್ಗಾನುಸಾರಿಗಳಾದವರು ವಂದನಾದಿಗಳನ್ನು ಮಾಡುವದು ವೇದವಿರೋಧಪ್ರಯುಕ್ತ ಪ್ರತ್ಯವಾಯಕರವಾಗಲಾರದು; ವೈದಿಕರಿಗೆ ವಂದನಾದ್ಯರ್ಹವಾದ ದೇವತಾಸ್ವರೂಪವು ವೇದವಿರುದ್ಧತಂತ್ರಪ್ರತಿಷ್ಠಿತಸ್ಥಲದಲ್ಲಿಯೂ ಶುದ್ಧವಾಗಿಯೇ ಇರುವದು ಎಂದು ಹೇಳಲ್ಪಟ್ಟಿರುವದು ಆದ್ದರಿಂದ ವೇದಾವಿರುದ್ಧವಾದ ಪಂಚರಾತ್ರ ತಂತ್ರದಿಂದಪ್ರತಿಷ್ಠಿತಸ್ಥಲದಲ್ಲಿ ಪಂಚರಾತ್ರತಂತ್ರಗಳಲ್ಲಿರುವ ಆನೇಕ ನಿಷೇಧ ವಚನಗಳನ್ನು ಅತಿಕ್ರಮಿಸಿ ಅದೀಕ್ಷಿತರಾದವರು ಪೂಜೆ ಮಾಡಬಹುದೆಂಬ ಅರ್ಥವು ಎಂದಿಗೂ ಇದರಿಂದ ಸಿದ್ಧಿಸಲಾರದು

ಮತ್ತು ಈ ವಚನದಲ್ಲಿ 'ಸಾಪಿ ವಂದ್ಯಾಚಸೇವ್ಯಾಚ' ಎಂದು ಅಪಿ ಶಬ್ದವಿರುವದರಿಂದ ಈ ವಚನದಲ್ಲಿ ಸ್ವಾರ್ಥದಲ್ಲಿ ಅಂದರೆ ಯಥಾಶ್ರುತವಾದ ತಂತ್ರಪತಿಷ್ಠಿತವಾದ ದೇವತಾವಂದನಾದಿಗಳನ್ನು ವೈದಿಕರು ಮಾಡಬೇಕೆಂಬ ವಿಧಿರೂಪವಾದ ಅರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಶಾಸ್ತ್ರಜ್ಞರು ಹೇಳಬೇಕಾಗಿರುವದು ಅಪಿ ಶಬ್ದವು ವಿಧಿಶಕ್ತಿಕುಂಠಕವೆಂದು ಅನೇಕ ಸ್ಥಲಗಳಲ್ಲಿ ನಿರೂಪಿಸಲ್ಪಟ್ಟಿರುವದು.

ಆತತಾಯಿನಮಾಯಾಂತಮಪಿ ವೇದಾನ್ತಪಾರಗಂ ।

ಜೆಘೋಂಪಂತೇ ಜೆಘೋಂಸೀಯಾನ್ನ ತ್ರೀನ ಬ್ರಹ್ಮಹಾ ಭವೇತ್ ||

ಎನ್ನುವ ವಚನವನ್ನು ಉದಾಹರಿಸಿ "ಅಪಿ ಶೇದಾಸ್ತ್ರ ಸಾರ್ಥಗನ್ನಿತ್ಯಪಿ ಶಬ್ದ ಶ್ರವಣಾನ್ನಿಷಿದ್ಧ ತ್ವ ಪ್ರತೀತಿಃ" ಎಂದು ಯಾಜ್ಞವಲ್ಕ್ಯಸ್ಮೃತಿ ವ್ಯಾಖ್ಯಾನದಲ್ಲಿ ವಿಜ್ಞಾನೇಶ್ವರರು ಸ್ಪಷ್ಟವಾಗಿ ಹೇಳಿರುವರು. ಪ್ರಕೃತದಲ್ಲಿಯೂ "ಸಾಪಿ" ಎಂಬ ಅಪಿಶಬ್ದವಿರುವದರಿಂದಲೂ ಪಂಚರಾತ್ರಾದಿ ತಂತ್ರಗಳಲ್ಲಿ ಅದೀಕ್ಷಿತ ಪೂಜಾದಿ ವಿಷಯದಲ್ಲಿ ಅನೇಕ ನಿಷೇಧಗಳಿರುವದರಿಂದಲೂ ತಂತ್ರ ಪ್ರತಿಷ್ಠಿತ ದೇವತೆಗೆ ಅದೀಕ್ಷಿತ ಪೂಜ್ಯತ್ವ ಪ್ರತೀತಿಯಲ್ಲಿ ತಾತ್ಪರ್ಯವಿಲ್ಲವೆಂದು ಸ್ವೀಕರಿಸಬೇಕಾಗಿರುವದು.

ಈ ರೀತಿಯಾಗಿ ತಂತ್ರೋಕ್ತೇ ಶ್ರೋತ್ರಾದಿ ವಚನವು ವಿಧಿರೂಪವಾಗಲಾರದೆಂಬುದನ್ನು ಆದ್ದರಿಂದ ಪಂಚರಾತ್ರ ತಂತ್ರದಲ್ಲಿರುವ ನಿಷೇಧವನ್ನು ಬಾಧಿಸುವ ಶಕ್ತಿ ಆ ವಚನಕ್ಕೆ ಇಲ್ಲವೆಂದುನ್ನು ನಿರೂಪಿಸಲ್ಪಟ್ಟಿತು. ಇನ್ನು ಮುಂದೆ ಈ ವಚನವನ್ನು ವಿಧಿರೂಪವೆಂದು ಇವರು ಒಪ್ಪಿದರೆ ಇವರಿಗೆ ಅನೇಕ ವಿಧವಾದ ವಿಪರೀತಫಲವೆ ಉಂಟಾಗುವದು ಎಂದು ಸ್ಥಾಪಿಸಲ್ಪಡುತ್ತೆ. ಹ್ಯಾಗೆಂದರೆ,

ಈ ವಚನದಲ್ಲಿರುವ ವೈದಿಕೈಃ ಯೆನ್ನುವದಕ್ಕೆ ಶ್ರೀ ಶೃಂಗೇರೀಸ್ವಾಮಿಗಳು ಮಾತ್ರ ಅಲ್ಲವೊ ಎಲ್ಲಾ ವೈದಿಕರೂ ಅರ್ಥವೋ? ಶೃಂಗೇರಿಸ್ವಾಮಿಗಳು ಮಾತ್ರ ಅರ್ಥವೆಂದು ಹೇಳುವಪಕ್ಷದಲ್ಲಿ ಸೂತಸಂಹಿತೆಗೆ ಶ್ರೀಶೃಂಗೇರಿಸ್ವಾಮಿಗಳಲ್ಲಿ ಇಷ್ಟು ಪಕ್ಷಪಾತವಾಗುವದಕ್ಕೆ ಕಾರಣವನ್ನು ವಿಚಾರಿಸಬೇಕಾಗಿಬರುವದು. ವೈದಿಕರೆಲ್ಲರು ಅರ್ಥವಾಗುವ ಪಕ್ಷಕ್ಕೆ ಈ ಪುರದಲ್ಲಿಯೂ ಸ್ಥಲಾಂತರದಲ್ಲಿಯೂ ವೈದಿಕರು ಸ್ಮಾರ್ತರಲ್ಲಿ ಇರುವರೊ ಇಲ್ಲವೋ? ಇರುವಪಕ್ಷಕ್ಕೆ ಅವರು ಯಾವ ಯಾವ ಪಾಂಚರಾತ್ರಾಲಯಗಳಲ್ಲಿ ಯಾವ ಯಾವ ಕಾಲದಲ್ಲಿ ಪೂಜೆಯನ್ನು ನಡಸಿರುವರೊ ಅದನ್ನು ಮಧ್ಯಸ್ಥರಾದವರು ವಿಚಾರಿಸಿದರೆ ಯಲ್ಲಿಯೂ ಅವರು ಪೂಜೆಮಾಡಲಿಲ್ಲವೆಂದು ಸತ್ಯವಾಗಿ ಅವರು ಹೇಳಬೇಕಾಗಿಬರುವದು. ಅವ

ಢು ಪೂಜಿಸಕೂಡದಿಲ್ಲವೆಂಬುವ ಪಕ್ಷದಲ್ಲಿ ಅವರು ತಂತ್ರೋಕ್ತೇನೇತ್ಯಾದಿ ಸೂತ ಸಂಹಿತಾ ವಚನೋಲ್ಲಂಘನೆ ಮಾಡಿದ ಪ್ರಯುಕ್ತ ಪಾಪಭಾಗಿಗಳಾಗಬೇಕಾಗಿ ಬರುವದು. ಅಥವಾ ಶೃಂಗೇರಿಸ್ವಾಮಿಗಳು ಒಬ್ಬರುವಿನಾ ಸ್ಮಾರ್ತರಲ್ಲಿ ವೈದಿಕರೆ ಇಲ್ಲವೆಂದು ಒಪ್ಪಿಕೊಳ್ಳಬೇಕಾಗಿಬರುವದು

ಈರೀತಿಯಾಗಿ ಸ್ಮಾರ್ತರೆ ಅನುಷ್ಠಾನ ಪರ್ಯವಸಾಯಿಯಾಗಿ ಮಾಡಿಕೊಳ್ಳದೆ ಇದ್ದರಿಂದಲೆ ಅನನುಷ್ಠಾನ ಲಕ್ಷಣಾ ಪ್ರಾಮಾಣ್ಯ ಪರಾಹತವಾಗುವ ವಚನಬಲದಿಂದ ಇತರರಂ ಕುರಿತು ತಮ್ಮ ಇಷ್ಟವನ್ನು ಸಾಧಿಸುವದಕ್ಕೆ ಉದ್ಯೋಗಿಸಿದವರ ಸಾಮರ್ಥ್ಯವನ್ನು ಮಧ್ಯಸ್ಥರು ಪರ್ಯಾಲೋಚಿಸಬೇಕು.

ಇಲ್ಲಿ ಮತ್ತೊಂದುವಿಷಯ ವಿಚಾರಿಸಬೇಕಾಗಿರುವದು—

ಏನಂದರೆ;—

"ತಂತ್ರೋಕ್ತೇನ ಪ್ರಕಾರೇಣ ದೇವತಾ ಯಾ ಪ್ರತಿಷ್ಠಿತಾ" ಯನ್ನುವವಚನದಲ್ಲಿ ಆಗಮ ಪರ್ಯಾಯವಾದ ತಂತ್ರಪದವು ಆಗಮ ಸಾಮಾನ್ಯ ವಾಚಕವಾಗಿರುವದ್ದರಿಂದಲೂ "ಬುದ್ಧಾಗಮೇ ಮುನಿವರಾ ಯದಿ ಸಂಸ್ಕೃತಶ್ಚೇತ್" ಯೆಂದು ಇದೇ ಅಧ್ಯಾಯದಲ್ಲಿ ನಾಲ್ಕೈದು ಶ್ಲೋಕಗಳಿಂದೆ ಪ್ರಸಕ್ತವಾಗಿರುವದ್ದರಿಂದಲೂ ತಂತ್ರಪದದಿಂದ ಬುದ್ಧಾಗಮವೂ ವಿವಕ್ಷಿತವೆಂದು ಹೇಳಬೇಕಷ್ಟೆ. ಹಾಗಾದರೆ ಸ್ಮಾರ್ತರಲ್ಲಿ ಸನ್ಯಾಸಿಗಳು ಮತ್ತು ಇತರರೂಸಹಾ ಬೌದ್ಧಾಲಯಗಳಿಗೆ ಹೋಗಿ ವಂದನೆಯನ್ನು ಪೂಜೆಯನ್ನೂಸಹಾ ಮಾಡದೆ ಯಿರುವದು ಇವರುಗಳಿಗೆಲ್ಲಾ ಪ್ರತ್ಯವಾಯಕರವಲ್ಲವೇ? ಯಿಲ್ಲದಪಕ್ಷಕ್ಕೆ ಇವರುಗಳೆಲ್ಲರೂ ವೈದಿಕತ್ವಾಭಿಮಾನವನ್ನು ಪರಿತ್ಯಜಿಸಬೇಕಾಗಿಬರುವದು. ಆದ್ದರಿಂದ ಬುದ್ಧಾಲಯದಲ್ಲಿ ಇವರುಗಳೆಲ್ಲರೂ ನಮಸ್ಕಾರ ಪೂಜಾದಿಗಳನ್ನು ಮಾಡುವವರಿವಿಗೂ ಇವರಿಗೆ ವೈದಿಕತ್ವವೂ ಈವಚನಕ್ಕೆ ಪ್ರಾಮಾಣ್ಯವೂ ಸಹ ಸಿದ್ಧಿಸಲಾರದು

ಆದ್ದರಿಂದ ಸರ್ವಥಾ ಈವಚನವು ತೃತೀಯ ವಿಷಯಮಾಲಂಕಾರ

ನ್ಯಾಯೇನ ಇವರಿಗೆ ಇಷ್ಟಸಿದ್ಧಿಯನ್ನು ಮಾಡದೆ ಅನಿಷ್ಟಪ್ರಾಪ್ತಿಯನ್ನು ಮಾಡುವದು ಒಂದುವೇಳೆ ಈವಚನದಲ್ಲಿ ರುವ ತಂತ್ರಪದಕ್ಕೆ ಬುದ್ಧಾಗಮ ವ್ಯತಿರಿಕ್ತವಾದ ತಂತ್ರವೇ ಅರ್ಥವೆಂದು ಹೇಳುವ ಪಕ್ಷಕ್ಕೆ ಯಥಾಶ್ರುತವಾದ ಸ್ವಾರಸಿಕಾರ್ಥವನ್ನು ಬಿಟ್ಟು ಇಚ್ಛಾನುಸಾರ ಅರ್ಥವನ್ನು ಹೇಳತಕ್ಕ ಇವರು ಪಂಚರಾತ್ರಾಗಮವ್ಯತಿರಿಕ್ತವೆಂದನ್ನೂ ಅದಕ್ಕೆ ಯಾತಕ್ಕೆ ಅರ್ಥಹೇಳಬಾರದು ಆದ್ದರಿಂದ ವಿಚಾರಾಕ್ಷಮವಾಗಿಯೂ ಸರ್ವಥಾ ಇವರಿಗೆ ಅನೇಕವಿಧವಾದ ಬಾಧೆಯನ್ನುಂಟುಮಾಡುವ ಈ ವಚನದ ಯಥಾಶ್ರುತಾರ್ಥವನ್ನು ಬಿಟ್ಟು ವೈದಿಕಪ್ರಶಂಸಾ ಪರತ್ವರೂಪ ಅರ್ಥವಾದತ್ವವನ್ನೇ ಇವರು ಸ್ವೀಕರಿಸಬೇಕು ಈ ವಚನದ ಉತ್ತರವಚನಗಳಲ್ಲಿರುವ "ಅಹೋವೈದಿಕಮಾಹಾತ್ಮ್ಯಂ ಮಯಾವಕ್ತುಂನಶಕ್ಯತೆ" ಇತ್ಯಾದಿ ವಾಕ್ಯಗಳಿಂದಲೇ ಇದು ಅರ್ಥವಾದ ರೂಪವೆಂದು ಸ್ಪಷ್ಟವಾಗುವದು. ಈರೀತಿಯಾಗಿ ಅರ್ಥವಾದತ್ವವನ್ನು ಸೀಕರಿಸತಕ್ಕ ಭಾರವು ಸಂಪೂರ್ಣವಾಗಿ ಇವರೇ ಹೊರತಕ್ಕದ್ದಾಗಿಲ್ಲ. ಇವರಿಗೆ ಕೂಟಸ್ಥರಾದ ಶ್ರೀ ಮಾಧವಾ ಚಾರ್ಯರೆಂಬುವರೇ ಈ ಶ್ಲೋಕದ ಉತ್ತರಶ್ಲೋಕವನ್ನು ಮೊದಲು ಮಾಡಿ ಅಧ್ಯಾಯಸಮಾಪ್ತಿಯವರಿಗೂ ಇರುವ ವಚನಗಳಿಗೆಲ್ಲಾ ಅರ್ಥವಾದತ್ವವನ್ನು "ತಂತ್ರೇಷು ದೀಕ್ಷಿತೊ ಮರ್ತ್ಯಃ ಇತ್ಯಾದಿ ವೈದಿಕ ಪ್ರಶಂಸಾಪರಂ" ಎಂದು ಸ್ಪಷ್ಟವಾಗಿ ಹೇಳಿ ವ್ಯಾಖ್ಯಾಲು ಮೂರುವೀಸಪಾಲು ಭಾರವನ್ನು ವಹಿಸಿರುವರು. ಈ ಒಂದು ಶ್ಲೋಕವನ್ನು ಮಾತ್ರ ಮುಂದಿನ ಶ್ಲೋಕಗಳ ರಾಶಿಗೆ ಸೇರಿಸಿಕೊಳ್ಳಬೇಕಾದ್ದು ಮಾತ್ರ ಇವರ ಭಾಗಕ್ಕೆ ಬಂದಿರುವದು

ಅನಂತರ-[ "ಮತ್ತು ಶ್ರೀವೈಷ್ಣವಮಹಾಜನರ ಪ್ರೊಸಿಡಿಂಗ್ಸ್‌ನಲ್ಲಿ ಉದಾಹರಿಸಿರುವ ವಚನಗಳಲ್ಲಿ ಆಗಮೋಕ್ತದೀಕ್ಷಾರಹಿತರಾದವರು ಆಗಮೋಕ್ತರೀತ್ಯಾಪ್ರತಿಷ್ಠಿತವಾದ ದೇವರನ್ನು ಮುಟ್ಟಬಾರದು ಅರ್ಚಿಸಬಾರದು. ಆಗಮೋಕ್ತ ದೀಕ್ಷಾಬದ್ಧರೇ ಪೂಜಿಸಬೇಕೆಂಬುವ ಅಭಿಪ್ರಾಯವನ್ನು ಹೇಳಿ

ದಾಗ್ಯೂ 'ಮಾಹಿಂಸ್ಯಾತ್ಸರ್ವಾಭೂತಾನಿ' ಎಂದು ಸಾಮಾನ್ಯತಃ ಪ್ರಾಣಿಸಾಮಾನ್ಯವನ್ನು ಹಿಂಸೆಮಾಡಬಾರದೆಂದು ಶಾಸ್ತ್ರವಿದ್ದಾಗ್ಯೂ ಅಗ್ನೀಷೋಮೀಯಂ ಪಶುಮಾಲಭೇತ | ಇತ್ಯಾದಿ ವಿಶೇಷ ಶ್ರುತಿಗಳಿಂದ ಬಾಧಿಸಲ್ಪಟ್ಟ ಈ ಸಾಮಾನ್ಯಶಾಸ್ತ್ರಗಳಿಗೆ ವಿಶೇಷವಿಧಿಪ್ರಾಪ್ತವಾದ ಅಗ್ನೀಷೋಮೀಯ, ವಾಯುವೀಯ, ಪಶ್ವಾಲಂಭನಾದಿಭಿನ್ನಭೂತಹಿಂಸಾನಿಷೇಧಪರತ್ವವನ್ನು ಹ್ಯಾಗೆ ಸಿದ್ಧಾಂತಮಾಡಿದಾರೋ ಅದೇಪ್ರಕಾರ ಪಂಚರಾತ್ರಾದ್ಯಾಗಮೋಕ್ತದೀಕ್ಷಾರಹಿತನಿಂದ ಪಂಚರಾತ್ರಾದ್ಯಾಗಮೋಕ್ತರೀತ್ಯಾ ಪ್ರತಿಷ್ಠಿತನಾದ ದೇವರು ಪೂಜಿಸಲ್ಪಡಬಾರದೆಂಬುವ ಸಾಮಾನ್ಯಶಾಸ್ತ್ರವು

ತಂತ್ರೋಕ್ತೇನ ಪ್ರಕಾರೇಣ ದೇವತಾಯಾ ಪ್ರತಿಷ್ಠಿತಾ |
ಸಾಪಿ ವಂದ್ಯಾ ಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ |

ಎಂಬ ವಿಶೇಷಶಾಸ್ತ್ರಗಳಿಂದ ಬಾಧಿಸಲ್ಪಟ್ಟದ್ದಾಗಿ ವೈದಿಕಭಿನ್ನರಾದ ಪಂಚರಾತ್ರಾದ್ಯಾಗಮೋಕ್ತದೀಕ್ಷಾರಹಿತರಾದ ವೈಖಾನಸರುಗಳಿಂದಲೂ ಸ್ತ್ರೀಶೂದ್ರಾದಿಗಳಿಂದಲೂ ಪೂಜಿಸಲ್ಪಡಬಾರದೆಂಬುವ ಅರ್ಥವನ್ನೇಕೊಡುವದೆಹೊರ್ತು ವೈದಿಕರು ಪೂಜಮಾಡುವದನ್ನು ನಿರ್ಬಂಧಿಸಲಾರದು.

ಮತ್ತು ಇಂಥಾ ವಿಶೇಷಶಾಸ್ತ್ರಗಳಿಂದ ಬಾಧಿಸಲ್ಪಡುವ ಸಾಮಾನ್ಯಶಾಸ್ತ್ರವು ಅರ್ಥವಾದರೂಪವಾಗಿ ತಾಂತ್ರಿಕರಿಗೆ ತಾಂತ್ರಿಕಪೂಜೆ ಶ್ರೇಷ್ಠವೆಂದು ಸ್ತೋತ್ರಪರವಾಗುವದೆಂದುನ್ನು ಹೇಳಬಹುದು. ಆದ್ದರಿಂದ ಶ್ರೀ ಜಗದ್ಗುರುಗಳವರು ಪೂಜೆಮಾಡಬಾರದೆಂದು ಸ್ಥಾಪಿಸತಕ್ಕದ್ದೆಂಬ ೧ನೆ ಉದ್ದೇಶ್ಯವು ಸರ್ವಥಾ ಸಿದ್ಧಿಸಲಿಲ್ಲವು " ] ಎಂದು ಬರದಿರುವರು.

ಆದರೆ ಇವರು ಪಂಚರಾತ್ರಶಾಸ್ತ್ರವನ್ನು ಸಾಮಾನ್ಯವಾಗಿಟ್ಟು ಮೇಲೆಹೇಳಿದ ಸೂತಸಂಹಿತೆಯ ವಚನವನ್ನು ವಿಶೇಷವಾಗಿಟ್ಟು ಉತ್ಸರ್ಗಾಪವಾದನ್ಯಾಯದಿಂದ ಬಾಧ್ಯಬಾಧಕಭಾವವಂ ಕಲ್ಪಿಸಿ ಮತ್ತು ಪಾಂಚರಾತ್ರಶಾಸ್ತ್ರಕ್ಕೆ ಅರ್ಥವಾದರೂಪತ್ವವನ್ನು ಕಲ್ಪಿಸಿ ಯಥೇಚ್ಛಾಪ್ರವೃತ್ತಿಗೆ

ಉಪಕ್ರಮೋಪಸಂಹಾರವನ್ನು ಆಲೋಚಿಸಿದರೆ ಮನ್ವಾದಿಸ್ಮೃತಿಗಳಿಗೆ ವೈದ್ಯಶಾಸ್ತ್ರ ದಲ್ಲಿರುವ ಧೂಮಪಾನಾದಿಗಳನ್ನು ಬೋಧಿಸುವ ದಿನಚರ್ಯಾಚಿಕಿತ್ಸಾಪ್ರಕರಣ ಗಳಂತೆಯೂ ಕಾಮಶಾಸ್ತ್ರದ ಪಾರದಾರಿಕಾದಿ ಪ್ರಕರಣಗಳಂತೆಯೂ ವೇದವಿರೋಧವಿರುವುದನ್ನು ನೋಡಿ ಮನ್ವಾದಿಶಾಸ್ತ್ರಗಳನ್ನು ಸಾಮಾನ್ಯ ಶಾಸ್ತ್ರಗಳನ್ನಾಗಿಯೂ ಬಾಧ್ಯಗಳನ್ನಾಗಿಯೂ ಕಲ್ಪಿಸಿ ಅಥವಾ ಅರ್ಥ ವಾದರೂಪವೆಂದು ಕಲ್ಪಿಸಿ ಸ್ವೈರಚಾರಿಗಳಾಗಿ ಪ್ರವರ್ತಿಸುವ ಮಹಾನುಭಾವ ರಾದ ವೈದಿಕಾವತಂಸಕರು ಇವರಿಗೆ ಜ್ಯೇಷ್ಠರೋ ಕನಿಷ್ಠರೋ ಎಂದು ಸಂದೇಹವುಂಟಾಗುವದು.

ಸ್ಮೃತಿಪುರಾಣಗಳಿಗೆ ವಿರೋಧಬಂದರೆ ಸ್ಮೃತಿಯೇ ಬಾಧಕವೆಂದು ಇವರೂ ಒಪ್ಪುವರು. ಅಂಥಾ ಸ್ಮೃತಿಗಳಿಗೆ ಪಾಂಚರಾತ್ರಶಾಸ್ತ್ರವು ಮೂಲವಾಗಿಯೂ ವೇದಸಮಾನವಾಗಿಯೂ ಇರುವುದೆಂದು ಹೇಳುವ ಮಹಾ ಭಾರತಾದಿ ಪ್ರಮಾಣಗಳನ್ನು ಹಿಂದೆಯೇ ತೋರಿಸಿರುವೆವು. ಹಾಗಾದರೆ ಪಾಂಚರಾತ್ರಶಾಸ್ತ್ರಕ್ಕೆ ಸ್ಕಾಂದಪುರಾಣಾಂತರ್ಗತವೆಂದು ಹೇಳುವ ಸೂತಸಂಹಿತೆಗೂ ವಿರೋಧಬಂದರೆ ಯಾವುದು ಬಾಧ್ಯವೋ ಅದನ್ನು ಶಾ ಸ್ತ್ರಜ್ಞರು ಇವರಿಗೆ ಬೋಧಿಸಬೇಕು.

ಮತ್ತು ಪಾಂಚರಾತ್ರಾಗಮೋಕ್ತ ದೀಕ್ಷಾರಹಿತರನ್ನು ವೈಖಾನಸರ ನ್ನೂ ಇತರ ತಂತ್ರದೀಕ್ಷಿತರನ್ನೂ ಸ್ತ್ರೀಶೂದ್ರಾದಿಗಳನ್ನೂ ಪ್ರತ್ಯೇಕವಾಗಿ ನಿರ್ದೇಶಿಸಿ ಅವರವರು ಮಾಡತಕ್ಕ ಗರ್ಭಗೃಹಪ್ರವೇಶ ಪೂಜಾದಿಗಳಿಗೆ ಪ್ರತ್ಯೇ ಕವಾಗಿ ವಿಭಿನ್ನವಾದ ಪ್ರಾಯಶ್ಚಿತ್ತಗಳು ಪಾಂಚರಾತ್ರಶಾಸ್ತ್ರದಲ್ಲಿ ಹೇಳ ಲ್ಪಟ್ಟಿರುತ್ತವೆ. ಹೀಗಿರುವಲ್ಲಿ ಆಗಮದೀಕ್ಷಾರಹಿತರು ಪೂಜೆಮಾಡಬಾರದು ಎಂಬವಚನಕ್ಕೆ ವೈಖಾನಸಶಾಸ್ತ್ರೈಕಪರತ್ವವನ್ನು ಹೇಳಿದರೆ, ವೈ ಖಾನಸಾದಿಪರವಾದ ನಿಷೇಧವಚನಗಳಿಗೆ ವೈಯರ್ಥ್ಯಾದಿ ದೋಷಗಳು ಪ್ರಸಕ್ತ ವಾಗುವವು. ಆದ್ದರಿಂದ ಇವರು ಹೇಳಿರುವ ಅರ್ಥಕ್ರಮವು ಅಸಂಗತವು.

ಷು ಭಗವದಾಲಯೇಷು ತದನ್ಯಸಿದ್ಧಾನ್ತಸ್ಥಿತಾನಾಂ ಪ್ರದಕ್ಷಿಣ ಪ್ರಣಾಮ ಮಾಲಾಕರಣ ದೀಪಾರೋಪಣ ಸಂಮಾರ್ಜನ ಸೇಚನೋಪಲೇಪನಾಲಂಕರಣ ರಕ್ಷಣ ಸಂವರ್ಧನ ಸ್ತೋತ್ರಾದೀನಾಂ ಸಾಧಾರಣಧರ್ಮಾಣಾಮಪಿ ಪ್ರತಿಷೇಧಮಾಶಂಕ್ಯಪರಿಜಹಾರ—ಪ್ರದಕ್ಷಿಣಪ್ರಣಾಮಾದಿ ರಾದ್ಧಾನ್ತೇನ್ಯತ್ರ ಕೇವಲಂ। ವಿಹಿತಂ ನಾರ್ಚನಂ ಕುರ್ಯಾತ್ ರಾಜರಾಷ್ಟ್ರಭಯಾವಹಂಇತಿ " ಇತ್ಯಾದಿನಾ ॥

ಈರೀತಿಯಾಗಿ ಧಾತ್ವರ್ಥದಲ್ಲಿ ಣಿಜರ್ಥಪ್ರೇರಣಾಂಶವನ್ನು ಅಂತರ್ಭಾವಿಸಿ ವಿರೋಧಪರಿಹಾರ ಮಾಡುವ ಕ್ರಮವು ಮೀಮಾಂಸಕಸಂಪ್ರದಾಯ ಸಿದ್ಧವಾಗಿಯೇ ಇರುವದ್ದರಿಂದ ಇದನ್ನು ನಾವಾಗಿಯೇ ಒಪ್ಪುವದು ಹ್ಯಾಗೆಂದು ಯೋಚಿಸಕೆಲಸವಿಲ್ಲ. ಹ್ಯಾಗಂದರೆ—

" ಪ್ರಜಾಪತಿರ್ವರುಣಾಯಾಶ್ವಮನಯತ್ಸ ಸ್ವಾಂ ದೇವತಾಮಾರ್ಛತ್ಸ ಪರ್ಯದೀರ್ಯತ ಸ ಏತಂ ವಾರುಣಂ ಚತುಷ್ಕಪಾಲಮಪಶ್ಯತ್ತಂನ್ನಿರವಪತ್ತತೊ ವೈ ಸ ವರುಣಪಾಶಾದಮುಚ್ಯತ ವರುಣೊ ವಾ ಏತಂ ಗೃಹ್ಣಾತಿ ಯೋಶ್ವಂ ಪ್ರತಿಗೃಹ್ಣಾತಿ ಯಾವತೋಶ್ವಾನ್ಪ್ರತಿಗೃಹ್ಣೀಯಾತ್ತಾವತೊ ವಾರುಣಾಂಶ್ಚತುಷ್ಕಪಾಲಾನ್ನಿರ್ವಪೇತ್॥ "

ಎಂಬ ಶ್ರುತಿವಾಕ್ಯದಲ್ಲಿ ಇರುವ " ಅಶ್ವಮನಯತ್ " ಎಂಬ ಪ್ರಬಲವಾದ ಉಪಕ್ರಮದೊಡನೆ ಬಂದ ವಿರೋಧವನ್ನು ಪರಿಹರಿಸುವದಕ್ಕಾಗಿ ಉಪಸಂಹಾರದಲ್ಲಿರುವ " ಪ್ರತಿಗೃಹ್ಣಾತಿ " ಎಂಬುವದಕ್ಕೆ " ಪ್ರತಿಗೃಹ್ಣೀಯಾತ್ " ಎನ್ನುವದಕ್ಕೂ ಪ್ರತಿಗ್ರಾಹಯತಿ, ' ಪ್ರತಿಗ್ರಾಹಯೇತ್ ' ಎಂದು ಣಿಜರ್ಥಘಟನೆಯಿಂದ ಅರ್ಥ ಕಲ್ಪಿಸಿ ವಿರೋಧಪರಿಹಾರವನ್ನು " ಲಿಂಗಾದಾರ್ತ್ವಿಜೇ ಸ್ಯಾತ್ " ಎನ್ನುವ ಅಶ್ವಪ್ರತಿಗ್ರಹೇಷ್ಟ್ಯಧಿಕರಣದಲ್ಲಿ ಪೂರ್ವಮೀಮಾಂಸಕರು ಮಾಡಿರುವರು.

ಪ್ರಕೃತದಲ್ಲಿ ಣಿಜರ್ಥವ್ಯಾಪಾರವನ್ನು ಧಾತ್ವರ್ಥದಲ್ಲಿ ಅಂತರ್ಭಾ

ವನಾಡವೇ ಇದ್ದರೂ ,, ವೈದಿಕ್ಯೈಃ '' ಎನ್ನುವ ಕರ್ತರಿತೃತೀಯೆಗೆ ಸ್ವತಂತ್ರಕರ್ತೃ ಪ್ರಯೋಜಕಕರ್ತೃ ಸಾಧಾರಣ ಕರ್ತೃತ್ವವು ಅರ್ಥವೆಂದು ಸ್ವೀಕರಿಸಿದರೂ ಪೂರ್ವೋಕ್ತರೀತಿಯಲ್ಲಿಯೇ ಅರ್ಥಪರ್ಯವಸಾನವಾಗಿ ವಿರೋಧಪರಿಹಾರವಾಗುವದು ಈರೀತಿಯನ್ನು ,, ಋತಂಪಿಬನ್ತೌಸುಕೃತಸ್ಯ ಲೋಕೇ ಎನ್ನುವ ಉಪನಿಷದ್ವಾಕ್ಯದಲ್ಲಿ ,, ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ '' ಎಂಬ ಉತ್ತರಮೀಮಾಂಸೆಯ ಸೂತ್ರದಲ್ಲಿ ಭಾಷ್ಯಕಾರರುಗಳು ಸ್ವೀಕರಿಸಿರುತ್ತಾರೆ. ಯಥಾ—ಶಾಂಕರಭಾಷ್ಯೇ—

,, ಯದ್ವಾ-ಜೀವಸ್ತಾವತ್ಪಿಬತಿ-ಈಶ್ವರಸ್ತು ಪಾಯಯತಿ-ಪಾಯಯನ್ನಪಿ ಪಿಬತೀತ್ಯುಚ್ಯತೆ, ಪಾಚಯಿತರ್ಯಪಿ ಪಕ್ತೃತ್ವಪ್ರಸಿದ್ಧಿದರ್ಶನಾತ್ '' ಇತ್ಯಾದಿ-

ವಸ್ತುತಃ- ಪ್ರಕೃತ ವಿರೋಧಪರಿಹಾರಕ್ಕಾಗಿ ಪೂರ್ವಮೀಮಾಂಸೆಯಲ್ಲಿರುವಂತೆ ಅಣಿಜನ್ತಧಾತ್ವರ್ಥದಲ್ಲಿ ಣಿಜರ್ಥಪ್ರೇರಣಾನ್ತರ್ಭಾವ ಮಾಡುವ ಆವಶ್ಯಕತೆಯೂ ಇಲ್ಲ. ಉತ್ತರಮೀಮಾಂಸೆಯಲ್ಲಿರುವಂತೆ ಸ್ವತಂತ್ರ ಕರ್ತೃಹೇತು ಕರ್ತೃಸಾಧಾರಣ ಕರ್ತೃತ್ವವಿವಕ್ಷೆಯ ಆವಶ್ಯಕತೆಯೂ ಇಲ್ಲ ಚುರಾದ್ಯನ್ತರ್ಗತವಾದ ಧಾತುವಿನಮೇಲೆ ಸ್ವಾರ್ಥಣಿಚ್ಪ್ರತ್ಯಯವನ್ನು ಮಾಡಿ ಅನೀಯರ್ಪ್ರತ್ಯಯಮಾಡಿದರೆ ಪೂಜನೀಯಾ ಎಂದು ಆಗುವಂತೆ ಸ್ವಾರ್ಥಣಿಜನ್ತವಾದ ' ಪೂಜಯತಿ ' ಎಂಬುವದರಮೇಲೆ ಹೇತುಮಣ್ಣಿಚ್ಪ್ರತ್ಯಯವನ್ನು ಮಾಡಿ ಅನೀಯರ್ಪ್ರತ್ಯಯವನ್ನು ಮಾಡಿದರೂ " ಣೇರನಿಟಿ " ಎಂದು ಸಿದ್ಧಾಂತಕೌಮುದ್ಯುಕ್ತರೀತಿಯಿಂದ ಣಿಜ್ಲೋಪಬಂದು ' ಪೂಜನೀಯಾ ' ಎಂದೇ ಆಗುವದು. ಆದ್ದರಿಂದ ಸ್ವಾರಸಿಕವಾಗಿಯೇ ' ಪೂಜನೀಯಾ ' ಎಂಬುವದಕ್ಕೆ ಪೂಜೆ ಮಾಡಿಸಲ್ಪಡಬೇಕು ಎಂಬ ಅರ್ಥವಾಗುವದು. ಆದ್ದರಿಂದ ವಿರೋಧಪರಿಹಾರಕ್ಕೋಸ್ಕರ ಉತ್ಸರ್ಗಾಪವಾದ ನ್ಯಾಯಪ್ರವೃತ್ತಿಗೆ ಸರ್ವಥಾ ಅವಕಾ

ಕವಿಲ್ಲವು. ಆದ್ದರಿಂದ ಇವರ ಉದ್ದೇಶ್ಯವು ದುರ್ಗತಮನೋರಥದಂತೆ ಆಯಿತು

ಈರೀತಿಯಾಗಿ ಮೇಲೆ ವಿವರಿಸಿ ಇರುವಪ್ರಕಾರ ವಿರೋಧಲೇಶವೂ ಇಲ್ಲದೆ ಇರುವದ್ದರಿಂದಲೇ-

ತಂತ್ರೋಕ್ತೇನ ಪ್ರಕಾರೇಣ ದೇವತಾ ಯಾ ಪ್ರತಿಷ್ಠಿತಾ ।
ಸಾಪಿ ವಂದ್ಯಾ ಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ ॥

ಎಂಬ ಒಂದು ವಚನಬಲದಿಂದ ಪಂಚರಾತ್ರಶಾಸ್ತ್ರದಲ್ಲಿ ಇರುವ ಅನೇಕ ವಚನಗಳಿಗೆ ಅರ್ಥವಾದತ್ವವನ್ನು ಕಲ್ಪಿಸಬೇಕೆಂಬ ಇವರ ಮನೋರಥವೂ ಭಂಗಪಟ್ಟಿತು. ಅರ್ಥವಾದತ್ವವನ್ನು ಕಲ್ಪಿಸಬೇಕಾದರೂ ಪೂರ್ವಮೀಮಾಂಸಾಶಾಸ್ತ್ರಸಿದ್ಧನಾದ ಭೂಯೋನುಗ್ರಹನ್ಯಾಯದಿಂದ ಸೂತಸಂಹಿತೆಯ ಒಂದು ವಚನಕ್ಕೆ ಅರ್ಥವಾದತ್ವವನ್ನು ಕಲ್ಪಿಸುವದೇ ಯುಕ್ತವು. ಈ ವಚನಾನಂತರವಿರುವ ವಚನಗಳಿಗೆಲ್ಲಾ ವ್ಯಾಖ್ಯಾಕರ್ತರೇ ವೈದಿಕಪ್ರಶಸ್ತ್ಯಪರತ್ವವನ್ನು ಹೇಳಿ ಅರ್ಥವಾದತ್ವವನ್ನು ಕಲ್ಪಿಸಿರುವವರಿಂದಲೂ ತತ್ಸಾಮಾನ್ಯದಿಂದ ಇದಕ್ಕೂ ಅರ್ಥವಾದತ್ವವನ್ನು ಕಲ್ಪಿಸುವದು ಅತ್ಯುತ್ತಮವಾದ ಮಾರ್ಗವೆನ್ನುವದೇ ಮೊದಲಾದ ವಿಷಯಗಳನ್ನು ಪೂರ್ವದಲ್ಲಿಯೇ ವಿವರಿಸಿರುವೆವು

ಈ ರೀತಿಯಾಗಿ ಇವರ ಮೂರನೇ ಉದ್ದೇಶ್ಯಕ್ಕೆ ಭಂಗವು ತೋರಿಸಲ್ಪಟ್ಟಿತು. ಇನ್ನುಮೇಲೆ ಇವರ ನಾಲ್ಕನೇ ಉದ್ದೇಶ್ಯವು ಸಿದ್ಧಿಸಲಾರದೆಂದು ನಿರೂಪಿಸಲ್ಪಡುವದು. ಹ್ಯಾಗೆಂದರೆ__

["ಇಷ್ಟುಮಾತ್ರವೇ ಅಲ್ಲವು. ಶ್ರೀವೈಷ್ಣವರ ಪ್ರೊಸಿಡಿಂಗ್ಸ್‌ನಲ್ಲಿ ಉದಹರಿಸಿರುವ ಕೆಲವು ವಚನಗಳು ಅನನ್ವಿತವಾಗಿರುವವಲ್ಲದೆ ಬಹಳ ವಚನಗಳು ಇವರ ಉದ್ದೇಶ್ಯಕ್ಕೆ ಸಾಧಕಗಳಲ್ಲದೆ ಬ್ಯಾರೆ ಅರ್ಥವನ್ನು ಕೊಡತಕ್ಕವುಗಳಾಗಿರುತ್ತವೆ."] ಎಂದು ಹೇಳಿರುತ್ತಾರೆ. ಈ ವಿಷಯದಲ್ಲಿ ಸ್ವಲ್ಪ

ಬರೆಯಬೇಕಾಗಿ ಇರುವುದು. ಏನೆಂದರೆ :—ಪ್ರಾಮಾಣಿಕವಾದ ಗ್ರನ್ಥಗಳಲ್ಲಿ ಯಥಾಶ್ರುತವಾಗಿ ಅನ್ವಯತೋರದೆ ಇದ್ದರೂ ವಿದ್ವಾಂಸರಾದವರು ಪ್ರಕರಣಾನುಸಾರ ಅಧ್ಯಾಹಾರಾದಿಗಳನ್ನು ಮಾಡಿಯಾದರೂ ವ್ಯಾಖ್ಯಾನ ಮಾಡುವದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವದು. ಇದಕ್ಕೆ ಪರಸ್ಸಹಸ್ರ ಉದಾಹರಣೆಗಳಿರುವವು. ಅಪ್ರಾಮಾಣಿಕವಾದ ಬೌದ್ಧಾದಿ ಗ್ರನ್ಥಗಳಲ್ಲಿ ಅನ್ವಯಕ್ಲೇಶ ಲೇಶವೂ ಇಲ್ಲದೇ ಇದ್ದರೂ ಅವುಗಳನ್ನು ಪರಿತ್ಯಜಿಸುವರು ಹೀಗಿರುವದ್ದರಿಂದ ಪ್ರಮಾಣಿತಮವಾದ ಈ ಗ್ರನ್ಥಗಳ ವಚನಗಳಲ್ಲಿ ಪ್ರಕರಣಾದ್ಯನುಸಾರ ಶಾಸ್ತ್ರಜ್ಞರಾದವರು ಅನ್ವಯವನ್ನು ಅರಿಯಬೇಕು. ಹಾಗೆ ಇವರು ಅರಿಯದೇ ಹೋಗುವುದು ಇವರ ದೋಷವಾಗುವುದೇ ಹೊರತು ಆ ವಚನಗಳ ದೋಷವಲ್ಲವು. ಅಂಧನು ಎದುರಿಗಿರುವ ಸ್ತಂಭವನ್ನ ತಿಳಿಯದೆ ಎಡವಿಬಿದ್ದರೆ ಅಂಧನ ದೋಷವೇ ವಿನಾ ಸ್ತಂಭದ ದೋಷವಲ್ಲವು

ಆದಿಮಧ್ಯಾಂತ ಉಪಾ್ತನಿ ಪ್ರಚ್ಛನ್ನಪಿಹಿತಾನಿಚ ।
ಬ್ರಹ್ಮಣಃ ಪರಿಗುಪ್ತ್ಯರ್ಥಂ ವೇದೇ ವ್ಯವಹಿತಾನಿಚ ।

ಎಂದು ನಿರುಕ್ತದಲ್ಲಿ ಇರುವಂತೆ ಪಾಪಿಗಳಿಗೆ ಝಡಿತಿಬೋಧವಾಗದಿರುವದಕ್ಕೆ ಶ್ರುತಿಗಳಲ್ಲಿ ಇರುವ ರೀತಿಯಲ್ಲಿ ಶ್ರುತಿಸದೃಶವಾದ ನಿರ್ದೋಷವಾದ ಭಗವತ್ಪ್ರೋಕ್ತ ಪಂಚರಾತ್ರದಲ್ಲಿಯೂ ಕೆಲವು ಕಠಿನವಾಗಿರುವದು ಯುಕ್ತವೇ ಸರಿ. ಆದ್ದರಿಂದ ಇವರಿಗೆ ಅನನ್ವಿತವಾದ್ದರಿಂದಲೇ ಅದಕ್ಕೆ ಏನು ದೋಷವೂ ಇಲ್ಲವು. ವಸ್ತುತಃ ಇವರಿಗೆ ಅನ್ವಯತೋರದೆ ಅನನ್ವಿತಗಳೆಂದು ಇವರು ಬರದು ಇರುವ ಸ್ಥಳಗಳು ಅಷ್ಟು ಕ್ಲೇಶವಿಂದ ಅರ್ಥಹೇಳಬೇಕಾದವುಗಳೇ ಅಲ್ಲ ಆ ಭಾಗಗಳಲ್ಲಿ ಸಾಧಾರಣವಾದ ಕಾವ್ಯವ್ಯುತ್ಪತ್ತಿ ಇರವವರಿಗೆ ಕೂಡ ಅನನ್ವಯಬುದ್ಧಿಯುಂಟಾಗಲಾರದು. ಹೀಗಿರುವಲ್ಲಿ ಇವರಿಗೆ ಅನ್ವಯತೋರದೇ ಇರುವದು ಶಾಸ್ತ್ರಪಾಂಡಿತ್ಯಾತಿಶಯಮೂಲಕವು.

ಇದು ಸ್ವ್ಯಾಗೋಚರೂ ಇರಲಿ. ಇವರು ಅನನ್ವಿತವೆಂದು ಹೇಳಿರುವದನ್ನು ವಿಚಾರಿಸೋಣ

[ "(೧) ಅವೀಕ್ಷಿತೈರ್ನರ್ಯೈರ್ವೋನೀಹಾ ರ್ಲೋಭಾದ್ವಾಪಿ ತಥೈವಚ ।
ಅಸ್ಪೃಶ್ಯಸ್ಪರ್ಶನೇ ಚೈವ ಜಲಸಂಪ್ರೋಕ್ಷಣಂಚರೇತ್ ॥

ಎಂಬದಾಗಿ ಪದ್ಮೋದ್ಭವ ಸಂಹಿತಾವಚನವೆಂದು ಪೂರ್ವೋತ್ತರ ಸಂದರ್ಭವಿಲ್ಲದೇ ಬರೆದಿರುವ ಈ ವಚನದಲ್ಲಿ ಅದೀಕ್ಷಿತೈರಿತ್ಯಾದಿ ತೃತೀಯಾಂತ ಪದಕ್ಕೆ ಏನು ಅರ್ಥವೋ! ಅದಕ್ಕೆ ಒಂದುಕಡೆಯೂ ಅನ್ವಯ ಹೇಳುವದಕ್ಕಾಗುವದಿಲ್ಲ ಯಾವದಕ್ಕೆ ಸಂಪ್ರೋಕ್ಷಣವೋ ಅದು ಗೊತ್ತಿಲ್ಲವು." ] ಎಂದಿರುತ್ತೆ. ಇದರಿಂದ ಪೂರ್ವೋತ್ತರಸಂದರ್ಭವನ್ನು ಸರ್ವಥಾ ನೋಡದೇತೇ ಇವರು ಪುಸ್ತಕವನ್ನು ಕೇವಲಾಸಂಬದ್ಧ ಮಾತಿನಿಂದ ಪೂರ್ತಿ ಮಾಡಿರುವರು ಎಂದು ಸ್ಪಷ್ಟವಾಗಿರುತ್ತೆ. ನಾವು ಪ್ರಾಯಶ್ಚಿತ್ತಸಂಗ್ರಹವೆಂದು ಉಪಕ್ರಮಿಸಿ ಬರೆದಿರುವೆವು. ಇದರಿಂದ ನಾವು ಬರೆದ ವಚನಗಳೆಲ್ಲಾ ಪ್ರಾಯಶ್ಚಿತ್ತಸಂಗ್ರಹವೆಂಬ ನಿಬಂಧಗ್ರಂಥದಲ್ಲಿ ಇರುವದೆಂದು ಸ್ಪಷ್ಟವಾಗಿರುವದು. ಆ ಗ್ರಂಥವನ್ನು ಇವರುಗಳು ನೋಡಿ ಅನ್ವಯಮಾಡಿಕೊಳ್ಳಬೇಕಾಗಿತ್ತು. ಮತ್ತು ಈ ವಚನವು ಪದ್ಮೋದ್ಭವಸಂಹಿತೆಯಲ್ಲಿರುವದೆಂದೂನ್ನೂ ನಾವು ಸೂಚಿಸಿರುವೆವು ಆ ಸಂಹಿತೆಯನ್ನಾದರೂ ಇವರು ನೋಡಿಕೊಂಡು ಅನ್ವಯಮಾಡಿಕೊಳ್ಳಬಹುದಾಗಿತ್ತು. ಅಥವಾ ಈ ಪುಸ್ತಕಗಳನ್ನು ತಾವು ನೋಡಬೇಕೆಂದು ಇವರು ಕೇಳಿದ್ದರೆ ನಾವು ಇವರಿಗೆ ಕಳುಹಿಸಿ ತೋರಿಸಿಕೊಡುತ್ತಿದ್ದೆವು. ಇಂಥಾ ಯಾವದೊಂದಕ್ಕೂ ಸಹನವಿಲ್ಲದೆ ಅಸೂಯೆ ಮತ್ತು ಆಲಸ್ಯವುಳ್ಳ ಇವರಿಗೆ ನಾವು ಪೂರ್ವೋತ್ತರಸಂದರ್ಭವನ್ನು ಎಷ್ಟುಬರೆದರೆ ಅನ್ವಯವಾದೀತು ಆದರೂ ಮಧ್ಯಸ್ಥರಿಗಾಗಿ ಪೂರ್ವಸಂದರ್ಭವನ್ನು ಪದ್ಮೋದ್ಭವಸಂಹಿತೆಯಲ್ಲಿರುವುದನ್ನು ಬರೆಯುವೆವು.

ಪದ್ಮೋದ್ಭವಸಂಹಿತಾಯಾಂ— ಪ್ರಾಯಶ್ಚಿತ್ತಾಧ್ಯಾಯೇ—

ಶೃಣುತಾವತ್ ಪ್ರವಕ್ಷ್ಯಾಮಿ ಸದ್ಯಸ್ಸಂಪ್ರೋಕ್ಷಣಂಪರಂ॥

ಇತ್ಯುಪಕ್ರಮ್ಯ ॥ ಕುಣ್ಡಗೋಳಾದಿಭಿಸ್ಸ್ಪೃಷ್ಟೇ ಬಿಂಬೇಧೂರ್ತಾದಿ
ಭಿಸ್ತಥಾ । ಕೃತಘ್ನೈಃ ಪತಿತೈಶ್ಚೈವ ಗುರುದಾರಪ
ರೈರಪಿ ॥ ಪಾಪರೋಗ ಪರಿಕ್ಲಿಷ್ಟೈಃನಾಸ್ತಿಕೈಶ್ಶ್ರು
ತಿದೂಷಕೈಃ । ವೇದವಿಕ್ರಯಕೈಶ್ಚಾಪಿ ಪಾಪಣ್ಡಸಮ
ಯಸ್ಥಿತೈಃ ॥ ಇತ್ಯನಂತರಂ—

" ಅದೀಕ್ಷಿತೈರ್ನರೈರ್ವಾಽಪಿಮೋಹಾತ್ ' ಇತ್ಯಾದಿ ವಚನವಿರುವದು. ಆದ್ದರಿಂದ ' ಅದೀಕ್ಷಿತೈಃ ' ಎನ್ನುವುದಕ್ಕೆ ಉಪಕ್ರಮದಲ್ಲಿ ಇರುವ ' ಸ್ಪೃಷ್ಟೇ ಬಿಂಬೇ ' ಎಂಬದರೊಡನೆ ಅನ್ವಯವು ಪ್ರಕೃತಸಂದರ್ಭದಲ್ಲಿ ಇಂಥಾ ಪೂರ್ವಭಾಗದವಚನವನ್ನು ಬರೆದರೆ ಕುಂಡಗೋಳಾದಿಗಳನ್ನೂ ಅದೀಕ್ಷಿತರನ್ನೂ ಪ್ರಾಯಶ್ಚಿತ್ತವಿಷಯದಲ್ಲಿ ಏಕರೂಪವಾಗಿ ಪರಿಗಣನೆ ಮಾಡಿರುವದನ್ನು ನೋಡಿ ಶಾಸ್ತ್ರರೀತಿಯನ್ನರಿಯದ ಕೆವಲರಿಗೆ ಮನಸ್ಸಿಗೆ ವ್ಯಾಕುಲತೆಯುಂಟಾಗಬಹುದೆಂದು ಆಲೋಚಿಸಿ ಪೂರ್ವಭಾಗವನ್ನು ಬಿಟ್ಟು ಅದೀಕ್ಷಿತವಿಷಯವಾದ ಭಾಗವನ್ನು ಮಾತ್ರ ಪೂರ್ವದಲ್ಲಿ ಬರೆದಿರುವೆವೇ ವಿನಾ ಬೇರೆ ಇಲ್ಲವು. ಈ ತತ್ತ್ವವನ್ನು ಅರಿಯದೆ ಮಾಡುವ ಪ್ರಲಾಪಕ್ಕೆ ನಾವು ಮಾಡತಕ್ಕದ್ದೇನಿದೆ. [" ಯಾವದಕ್ಕೆ ಸಂಪ್ರೋಕ್ಷಣವ್ರೋ ಅದು ಗೊತ್ತಿಲ್ಲವು.] " ಎಂದು ಹೇಳಿರುವರು. ಇದು ಆಶ್ಚರ್ಯವು ಜ್ವರ ಬಂದರೆ ಕಷಾಯವನ್ನು ಕೊಡಬೇಕೆಂದು ವೈದ್ಯರು ಹೇಳಿದರೆ ಯಾರಿಗೆ ಕಷಾಯ ಕೊಡಬೇಕೋ ಅದು ಗೊತ್ತಾಗುತ್ತದೋ ಇಲ್ಲವ್ರೋ ಗೋಪಾಲರನ್ನೇ ಕೇಳಬೇಕು. ಇವರಿಗೆ ಆ ವಾಕ್ಯದಲ್ಲಿಯೂ ಸಂದೇಹಬಂದು ಮನೆಯಲ್ಲಿ ಒಬ್ಬರಿಗೆ ಜ್ವರಬಂದರೆ ಮತ್ತೊಬ್ಬರಿಗೆ ಕಷಾಯವನ್ನು ಕೊಡಲುಪಕ್ರಮಿಸಬಹುದು. ಆಹಾ । ಏನು ಪಾಂಡಿತ್ಯ ಇವರಿಗೆ ಸಂಭವಿಸಿರುವದು. ದೀಕ್ಷಿತೇತರರುಸ್ಪೃಶಿಸಕೂ

ಷದಬಿಂಬಾದಿಗಳನ್ನು ದೀಕ್ಷಿತೇತರರು ಸ್ಪೃಶಿಸಿದರೆ ಜಲಸಂಪ್ರೋಕ್ಷಣೆಯು ನ್ನು ಮಾಡಬೇಕೆಂದರೆ ತದ್ಬಿಂಬಾದಿಗಳಿಗೆ ಜಲಸಂಪ್ರೋಕ್ಷಣೆ ಮಾಡಬೇಕೆಂದು ಅರ್ಥವಾಗುತ್ತದೆಯೋ ಇಲ್ಲವೋ ಮಧ್ಯಸ್ಥರು ಯೋಚಿಸಬೇಕು ಮು ಖ್ಯವಾಗಿ ಇಂಥಾ ಪ್ರಬಲವ್ಯುತ್ಪತ್ತಿಯುಳ್ಳವರು ಬರದ ಆಕ್ಷೇಪಕ್ಕೆ ನಾವು ಉತ್ತರವನ್ನು ಬರೆಯಬೇಕಾಗಿ ಬಂದದ್ದಕ್ಕೆ ಸಂತೋಷಪಡಬೇಕಾಗಿ ಇರುವದು. ಅನಂತರ—

[ " (೨) ಮತ್ತು ನಾರದೀಯಸಂಹಿತಾಯಾಂ—

ಪ್ರತಿಲೋಮೈಸ್ತು ಸಂಸ್ಪೃಷ್ಟೇ ಬಿಂಬೇ ವೈಖಾನಸೇತರೈಃ।

ಅಥಮುಸ್ನಪನಂ ಕುರ್ಯಾತ್ ಹೋಮದಾನಸಮನ್ವಿತಂ ।

ವೈಖಾನಸೈಸ್ತು ಸಂಸ್ಪೃಷ್ಟೇ ಪಯಸ್ನಾನೇನಶುದ್ಧ್ಯತಿ ।

ಎಂಬದಾಗಿದೆ. ಈ ವಚನಕ್ಕೆ ವೈಖಾನಸೇತರರಾದ ಪ್ರತಿಲೋಮಜಾತೀಯು ರಿಂದ ಬಿಂಬವು ಸ್ಪರ್ಶಮಾಡಲ್ಪಟ್ಟರೆ ಅಥಮುಸ್ನಪನಮಾಡಬೇಕೆಂತಲೂ ವೈಖಾನಸರಿಂದ ಸ್ಪೃಶಿಸಲ್ಪಟ್ಟರೆ ಪಯಸ್ನಾನದಿಂದ ಶುದ್ಧಿಯೆಂದು ಅರ್ಥ ವನ್ನು ಹೇಳಬೇಕು ಈ ವಚನದಿಂದ ಪ್ರಕೃತದಲ್ಲಿ ಏನು ಪ್ರಯೋಜನ ವೋ ವಿದ್ವಾಂಸರೇ ಊಹಿಸಬಹುದು ಅಥವಾ ಪ್ರತಿಲೋಮೈಃ ವೈಖಾನ ಸೇತರೈಃ ಅನ್ನುವ ಪದಗಳಿಗೆ ವಿಶೇಷಣ ವಿಶೇಷ್ಯಭಾವವಂ ತಪ್ಪಿಸಿ ಪ್ರತಿ ಲೋಮಜಾತಿಯವರಿಂದ ಸ್ಪೃಶಿಸಲ್ಪಟ್ಟರೂ ಮತ್ತು ವೈಖಾನಸೇತರರಿಂದ ಸ್ಪೃಶಿಸಲ್ಪಟ್ಟರೂ, ಅಥಮುಸ್ನಪನ ಮಾಡಬೇಕೆಂದು ಅರ್ಥಮಾಡಿ ಪ್ರಕೃತ ದಲ್ಲಿ ಶ್ರೀ ಶೃಂಗೇರಿಸ್ವಾಮಿಗಳವರು ವೈಖಾನಸರಲ್ಲವಾದ್ದರಿಂದ ವೈಖಾನಸೇತರ ರಿಂದ ಸ್ಪೃಶಿಸಲ್ಪಟ್ಟದ್ದರಿಂದ ಸ್ನಪನಮಾಡಿಸಬೇಕೆಂದು ಭಾವಿಸುವ ಪಕ್ಷ ದಲ್ಲಿ ಪ್ರಕೃತದಲ್ಲಿ ಪೂಜೆಮಾಡುವ ಅರ್ಚಕನೂ ವೈಖಾನಸೇತರನಾಗಿರುವದ ರಿಂದ ಇವನು ಮುಟ್ಟಿದರೂ ಸಂಪ್ರೋಕ್ಷಣೆ ಮಾಡಬೇಕಾಗುತ್ತಾದ್ದರಿಂದ ಇಷ್ಟಸಿದ್ಧಿ ತಪ್ಪಿಹೋಗಿ ದೊಡ್ಡಅನಿಷ್ಟಸಿದ್ಧಿಯಾಗುವುದು. ಇಷ್ಟಕ್ಕೂ

ಶ್ರೀ ಸ್ವಾಮಿಗಳವರು ಸಾಕ್ಷಾತ್ತಾಗಿ ಬಿಂಬಸ್ಪರ್ಶಮಾಡಲಿಲ್ಲವೆಂದು ಈ ಶ್ರೀ ವೈಷ್ಣವರೇ ಒಪ್ಪಿಕೊಂಡಿರುವದರಿಂದ ಈ ವಚನಗಳನ್ನು ಇವರು ಬರೆದಿರುವದು ನಿರರ್ಥಕವೆಂದು ಯಾರೂ ಒಪ್ಪದಿರಲಾರರು " ] ಎಂದಿರುತ್ತದೆ

ಇದು ಅಸಂಗತವು. ಹ್ಯಾಗಂದರೆ— ಈ ನಾರದ ಸಂಹಿತೆಯಲ್ಲಿ ಪಾಂಚರಾತ್ರರೀತ್ಯಾ ಪೂಜಾವಿಧಾನವನ್ನು ವಿಧಿಸಿ ಪಾಂಚರಾತ್ರಾನುಸಾರಿಗಳಲ್ಲದವರು ಬಿಂಬಸ್ಪರ್ಶವನ್ನು ಮಾಡಕೂಡದೆಂದು ಸಾಮಾನ್ಯವಾಗಿ ಹೇಳಿ ಅದಕ್ಕೆ ನಿಷ್ಕೃತಿಯನ್ನು ಹೇಳುವ ಕಾಲದಲ್ಲಿ ಅನುಲೋಮಾದಿ ಸ್ಪರ್ಶನದಲ್ಲಿ ಪ್ರಾಯಶ್ಚಿತ್ತವನ್ನು ಹೇಳಿದ ನನ್ತರ, ಪ್ರತಿಲೋಮ ಸ್ಪರ್ಶದಲ್ಲಿಯೂ ವೈಖಾನಸೇತರಸ್ಪರ್ಶದಲ್ಲಿಯೂ ಈ ವಚನವಲ್ಲಿ ಪ್ರಾಯಶ್ಚಿತ್ತ ಹೇಳಲ್ಪಟ್ಟಿರುವುದು. ಪ್ರಕರಣಾನುಸಾರ ಇಲ್ಲಿ ಇರುವ ವೈಖಾನಸೇತರ ಪದಕ್ಕೆ ಪಂಚರಾತ್ರಾನನುಸಾರಿಗಳಾದ ವೈಖಾನಸೇತರರೆಂದೇ ಅರ್ಥವು. ಪಂಚರಾತ್ರ ಸಿದ್ಧಾನ್ತವನ್ನು ಅವಲಂಬಿಸದೇ ಇರುವವರು ವೈಖಾನಸೇತರರು ಅಂದರೆಅದೀಕ್ಷಿತ ಶೈವಾದಿತಂತ್ರದೀಕ್ಷಿತಾನ್ಯತರರೆಂದುನ್ನೂ ವೈಖಾನಸತಂತ್ರದೀಕ್ಷಿತರೆಂದುನ್ನೂ ಎರಡು ವಿಧವಾಗಿರುವರು ಪ್ರಥಮಕೋಟಿಪ್ರವಿಷ್ಟರುನ್ನೂ, ಪ್ರತಿಲೋಮರುನ್ನೂ ಸ್ಪೃಶಿಸಿದರೆ ದಾನಹೋಮಪೂರ್ವಕವಾದ ಸ್ನಪನ ವಿಶೇಷವು ಪ್ರಾಯಶ್ಚಿತ್ತವೆಂದುನ್ನೂ ಶ್ರೀ ಪಂಚರಾತ್ರಾಗಮಕ್ಕೆ ಸನ್ನಿಹಿತರಾದ ವೈಖಾನಸರೆಂಬ ದ್ವಿತೀಯಕೋಟಿ ಪ್ರವಿಷ್ಟರಾದವರು ಸ್ಪೃಶಿಸಿದರೆ ಮೊದಲು ಹೇಳಿದ ಪ್ರಾಯಶ್ಚಿತ್ತಕ್ಕಿಂತಲೂ ನ್ಯೂನವಾದ ಪಯಸ್ಸ್ನಾನರೂಪವಾದ ಪ್ರಾಯಶ್ಚಿತ್ತವೆಂತಲೂ, ಈ ವಚನಕ್ಕೆ ಅರ್ಥವು ಪೂರ್ವೋತ್ತರ ಸಂದರ್ಭಾನುಸಾರಿಯಾಗಿಯೂ ಶಾಸ್ತ್ರವಿರುದ್ಧವಾಗಿಯೂ, ಅಬಾಧಿತವಾಗಿಯೂ ಇರುವದು ಇದರಿಂದ ವೈಷ್ಣವದೀಕ್ಷೆಯಿಲ್ಲದ ಯಾರೂ ಬಿಂಬವನ್ನು ಸ್ಪೃಶಿಸಕೂಡದೆಂಬುವದು ಸಿದ್ಧವಾಗುವದರಿಂದಲೂ ಶ್ರೀ ಶೃಂಗೇರೀ ಸ್ವಾಮಿಗಳು ಬಿಂಬಸ್ಪರ್ಶ ಮಾಡದೇಯಿದ್ದಾಗ್ಯೂ ಗರ್ಭಗೃಹಪ್ರವೇಶವು

ಪ್ರಾಯಶ್ಚಿತ್ತ ವಿಷಯದಲ್ಲಿ ಬಿಂಬಸ್ಪರ್ಶತುಲ್ಯವೆಂದು ಪ್ರಮಾಣವನ್ನು ಉಪಹರಿಸಿರುವುದರಿಂದಲೂ ಈ ವಚನವು ಉದಾಹರಿಸಲ್ಪಟ್ಟಿರುವದು ಸಾರ್ಥಕವಾಗಿಯೇ ಇರುವದು ಆದ್ದರಿಂದ ಇವರು ಹೇಳಿರುವ ಆಕ್ಷೇಪಕ್ಕೆ ಯಾವದಕ್ಕೂ ಅವಕಾಶವಿರುವದಿಲ್ಲ

ಮತ್ತು ನಾವು ಉದಾಹರಿಸಿರುವ ನಾರದೀಯವಚನದ ಕೊನೆಭಾಗದಲ್ಲಿರುವ "ಪ್ರಭಾಪೀಠಾಸ್ತ್ರಗೇಹಂತು ಸಮಮೇತಚ್ಚತುಷ್ಟಯಂ" ಎನ್ನುವ ಶ್ಲೋಕಾರ್ಥವನ್ನು ಇವರು ೬ನೇ ಪೇಜಿನಲ್ಲಿ ಅನುವಾದ ಮಾಡಿದ್ದಾಗ್ಯೂ ವಿಚಾರಕಾಲದಲ್ಲಿ ಇವರಿಗೆ ಕಂಡೇಗಡುಸಾದ ಅದನ್ನು ಮಾತ್ರ ಬರಿಯದೇ ಇಲ್ಲದಂತೆ ಭಾವಿಸಿ ಸ್ವೇಚ್ಛೆಯಾಗಿ ಬರಿಯುವವರ ಚಾತುರ್ಯವನ್ನು ವಿದ್ವಾಂಸರು ಕಂಡು ಹಿಡಿಯದೇ ಇರಲಾರರು

ಯದ್ಬಿಂಬಮಿತ್ಯಾದಿ ವಚನದಲ್ಲಿ 'ಅನ್ಯಮಾರ್ಗೇಣ' 'ವಿಧ್ಯಂತರೇಣ' ಎಂದಿರುವದರಿಂದ ಪಂಚರಾತ್ರಸ್ಥಲದಲ್ಲಿ ಪಂಚರಾತ್ರಾತಿರಿಕ್ತವಾದ ಯಾವದೊಂದು ವಿಧಿಯಿಂದಲೂ ಪೂಜೆಯನ್ನು ನಡಿಸಕೂಡದೆಂದು ಆ ವಚನಗಳಿಗೆ ಅರ್ಥವೆಂದು ಪೂರ್ವದಲ್ಲಿಯೇ ನಿರೂಪಿಸಿರುವದರಿಂದಲೂ ಶ್ರೀರಂಗನಾಥಸ್ವಾಮಿಯವರು ಪಂಚರಾತ್ರಕ್ರಮದಿಂದಲೇ ಪ್ರಥಮತಃ ಗೌತಮರಿಂದ ಪೂಜಿಸಲ್ಪಟ್ಟರೆಂಬ ವಿಷಯವು ಪೂರ್ವದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವದರಿಂದಲೂ,

[ "ಯದ್ಬಿಂಬಂ ಯೇನ ತಂತ್ರೇಣ ಸಮಾರಬ್ಧಂ ಪುರಾದಿತಃ ।
ಪ್ರಾಸಾದಂ ವಾ ತತಸ್ತೇನ ತಂತ್ರೇಣೈವ ತದರ್ಚಯೇತ್ ॥

ಎಂದು ಮೊದಲುಮಾಡಿಕೊಂಡು-

ತದ್ದೋಷಶಾಂತಯೇವಿಷ್ಣೋಃ ಕಾರ್ಯಂಸ್ನಪನಮುತ್ತಮಂ ।

ಎಂಬುವ ಪರ್ಯಂತವೂ ಇರತಕ್ಕ ವಚನಗಳಿಗೆ ಪಂಚರಾತ್ರ ವೈಖಾನಸ ಪಾಶುಪತಾದ್ಯಾಗಮಗಳಿಗೆ ಪರಸ್ಪರ ಸಾಂಕರ್ಯ ಮಾಡಬಾರದು. ಹಾಗೆ

ಸಾಂಕರ್ಯ ಮಾಡುವದು ದೋಷಾವಹವೆಂದುನ್ನೂ ಆದ್ದರಿಂದ ಒಂದು ಆಗಮೋಕ್ತರೀತ್ಯಾ ಪ್ರತಿಷ್ಠೆ ಮಾಡಲ್ಪಟ್ಟ ದೇವರಿಗೆ ಮತ್ತೊಂದು ಆಗಮೋಕ್ತ ರೀತ್ಯಾ ಪೂಜಾದಿಗಳನ್ನು ಮಾಡಬಾರದೆಂದು ಅರ್ಥವಷ್ಟೆ. ಪ್ರಕೃತದಲ್ಲಿ ಶ್ರೀರಂಗನಾಥಸ್ವಾಮಿಯವರು ಪಂಚರಾತ್ರಾಗಮೋಕ್ತರೀತಿಯಿಂದ ಪ್ರತಿಷ್ಠೆಮಾಡಲ್ಪಟ್ಟವರಲ್ಲವೆಂದು ಮೊದಲೇ ಹೇಳಲ್ಪಟ್ಟಿರುವದಲ್ಲದೆ ಪ್ರಕೃತದಲ್ಲಿ ಯಾವಆಗಮೋಕ್ತರೀತಿಯಿಂದಲೂ ಶ್ರೀ ಶೃಂಗೇರಿಸ್ವಾಮಿಗಳವರು ಪೂಜೆ ಮಾಡತಕ್ಕವರಲ್ಲದೆ ವೈದಿಕಮಾರ್ಗೋಕ್ತ ಪೂಜೆಯಂ ನಡಿಸತಕ್ಕವರಾದ್ದರಿಂದ ಇವರು ತಾಂತ್ರಿಕಪೂಜೆಯನ್ನು ಮಾಡಲಿಲ್ಲವಾಗಿ ತಂತ್ರಸಾಂಕರ್ಯಕ್ಕೆ ಅವಕಾಶವಿಲ್ಲದೆ ಇರುವದ್ದರಿಂದ ಇಷ್ಟು ವಚನಗಳನ್ನು ಬರೆದಿರುವದು ವ್ಯರ್ಥವೆಂದು ವಚನಗಳನ್ನು ಬರೆದಿರುವರೇ ಒಪ್ಪದಿರಲಾರರು ” ] ಎಂದು ಬರೆದಿರುವದು ಅಸಂಗತವೆಂದು ಇವರೇ ಒಪ್ಪದೇ ಇರಲಾರರು ಆದ್ದರಿಂದ ಯಸ್ಮಿಂಬಿಂಬೇತ್ಯಾದಿ ವಚನಗಳನ್ನು ನಾವು ಉದಾಹರಿಸಿರುವದು ಸಾರ್ಥಕವಾಗಿಯೇ ಇರುವದು

(೩) ಪರಮಪುರುಷಸಂಹಿತಾವಚನವು ಅದೀಕ್ಷಿತರು ಗರ್ಭಗೃಹ ಪ್ರವೇಶಾದಿಗಳನ್ನು ಮಾಡುವುದಕ್ಕೆ ಸಾಕ್ಷಾತ್ತಾಗಿಯೇ ನಿಷೇಧವನ್ನು ಬೋಧಿಸುವುದಾಗಿರುತ್ತೆ ಹ್ಯಾಗೆಂದರೆ—

ಸ್ಪೃಷ್ಟೇತ್ವಶಾಸ್ತ್ರಸಂಸಿದ್ಧೈಃ ದೀಕ್ಷಿತೈಸ್ತದ್ವಿಧಾನತಃ ।
ಅದೀಕ್ಷಿತೈಶ್ಚಾವಿದ್ವದ್ಭಿರ್ಮೂಲಬಿಂಬಾದಿಕೇತಥಾ ।
ಗರ್ಭಗೇಹಪ್ರವಿಷ್ಟೇನಾಪರಚಕ್ರಾದ್ಭಯಂಧ್ರುವಂ ।
ಪುಣ್ಯಾಹಂವಾಚಯಿತ್ವಾಸ್ತು ಶಾನ್ತಿಹೋಮಂತುಕಾರಯೇತ್ ।
ಪಂಚಶುದ್ಧಿಂಕ್ರಮಾತ್ಕೃತ್ವಾಬಲಿಮಸ್ತ್ರೇಣನಿಕ್ಷಿಪೇತ್ ।
ಸ್ನಪನಂಕಾರಯೇದನ್ತು ಪೂಜಯೇದ್ವಿಧಿಪೂರ್ವಕಂ । ಇತಿ.

ಈ ರೀತಿಯಾಗಿ ಈ ಪರಮಪುರುಷಸಂಹಿತಾವಚನದಲ್ಲಿ ಅದೀಕ್ಷಿತರಿಗೆ ಗರ್ಭಗೃಹ ಪ್ರವೇಶ ನಿಷೇಧವಿದ್ದಾಗ್ಯೂ ಆ ವಚನವನ್ನು ಸಂಪೂರ್ಣವಾಗಿ ಬರಿಯದೇ ಆ ವಚನವನ್ನೆಲ್ಲಾ ತಂತ್ರಸಾಂಕರ್ಯಪರವೆಂದು ಕಲ್ಪಿಸಿಕೊಂಡು,

['ಪರಮಪುರುಷಸಂಹಿತಾಯಾಂ—

ಸ್ಪೃಷ್ಟತ್ವಶಾಸ್ತ್ರಸಂಸಿದ್ಧ್ಯೈಃ ದೀಕ್ಷಿತೈಸ್ತದ್ವಿಧಾನತಃ ।
ಅದೀಕ್ಷಿತೈರ್ವಾಪಿದ್ವಿಜೈರ್ಮೂಲಬಿಂಬಾದಿಕೇತಧಾ ।
ಗರ್ಭಗೇಹೆಪ್ರವಿಷ್ಟೈರ್ವಾ ಪರಚಕ್ರಾದ್ಭಯಂಧ್ರುವಂ ।
ಅನ್ಯೈಸ್ತಂತ್ರೈರ್ದ್ವಿಜಶ್ರೇಷ್ಠ ನಿತ್ಯಂನೈಮಿತ್ತಿಕಂತುವಾ ।
ಯೋವೋಹಾದ್ಯದಿಕುರ್ವೀತತತ್ರಪೂಜಾಸಂಕರೋಭವೇತ್ ।

ಎಂದು ಉಪಕ್ರಮಿಸಿ ತಸ್ಮಾತ್ಸರ್ವಪ್ರಯತ್ನೇನಸಾಂಕರ್ಯಂನತುಕಾರಯೇತ್। ಎಂದು ಹೇಳಿ ಬ್ರಾಹ್ಮಣಾನ್ಭೋಜಯೇತ್ಪಶ್ಚಾತ್ತೇನಶಾಂತಿರ್ಭವಿಷ್ಯತಿ। ಎಂಬುವ ಪರ್ಯಂತ ಇರತಕ್ಕ ವಚನಗಳಿಗೆ ಒಂದು ತಂತ್ರದಿಂದ ಪ್ರತಿಷ್ಠೆ ಮಾಡಲ್ಪಟ್ಟು ಪೂಜೆಮಾಡಲ್ಪಡುತ್ತಿರುವ ದೇವರಿಗೆ ಮತ್ತೊಂದು ತಂತ್ರ ಮಾರ್ಗದಿಂದ ಪೂಜೆಮಾಡಿದರೆ ತಂತ್ರಸಾಂಕರ್ಯವಾಗುವದೆಂದೂನ್ನು ತಂತ್ರ ಸಾಂಕರ್ಯ ಮಾಡಬಾರದೆಂದು ಅರ್ಥವು ಪ್ರಕೃತದಲ್ಲಿ ಯಾವ ತಂತ್ರಸಾಂಕರ್ಯವೂ ಆಗಲಿಲ್ಲವೆಂದೂನ್ನೂ ಶ್ರೀರಂಗನಾಥದೇವರು ತಂತ್ರರೀತಿಯಿಂದ ಪ್ರತಿಷ್ಠಿತರಲ್ಲವೆಂದೂನ್ನೂ ಮೊದಲೇ ನಿರ್ಧರಿಸಲ್ಪಟ್ಟಿದೆ '] ಎಂದು ಬರದು ತಮ್ಮ ಚಮತ್ಕಾರವನ್ನೆಲ್ಲಾ ತೋರಿಸಿರುವದು ಆಶ್ಚರ್ಯಕರವಾಗಿರುತ್ತೆ. ಉತ್ತರ ವಚನದಲ್ಲಿ ತಂತ್ರಸಾಂಕರ್ಯನಿಷೇಧವಿದ್ದ ಮಾತ್ರಕ್ಕೆ ಗರ್ಭಗೃಹ ಪ್ರವೇಶವನ್ನು ಸ್ಪಷ್ಟವಾಗಿ ನಿಷೇಧಿಸುವ ಪೂರ್ವವಚನವು ಕೂಡಾ ತಂತ್ರಸಾಂಕರ್ಯನಿಷೇಧಪರವಾದೀತೆ ? ವಿದ್ವಾಂಸರು ಯೋಚಿಸಬೇಕು ಇವರಿಗೆ ಇರುವ ಅನನ್ವಯ ಭ್ರಾಂತಿಯನ್ನು ಹೋಗಲಾಡಿಸು

ವದಕ್ಕಾಗಿ ಈ ವಚನದ ಅನ್ವಯವನ್ನು ಅರ್ಥವನ್ನು ಸಹ ಬರಿಯುವೆವು.

"ಅಶಾಸ್ತ್ರಸಂಸಿದ್ಧೈ ರ್ದೀಕ್ಷಿತೈಃ-ತದ್ವಿಧಾನತಃ ಅದೀಕ್ಷಿತೈ

ರ್ವಾ ಬಿಂಬಾದಿಕೇ ಸ್ಪೃಷ್ಟೇ ಗರ್ಭಗೇಹೇ ಪ್ರವಿಷ್ಟೇ ವಾ ಪರ

ಚಕ್ರಾದ್ಯ ಯಂಧ್ರವಂ" ಎಂದು ಅನ್ವಯವು

ದೀಕ್ಷಿತರೆಲ್ಲರೂ ಯತ್ಕಿಂಚಿಚ್ಛಾಸ್ತ್ರಸಿದ್ಧರಾಗಿಯೇ ಇರುವದರಿಂದ ಅಶಾಸ್ತ್ರ ಸಂಸಿದ್ಧೈಃ ಎನ್ನುವದರಲ್ಲಿರುವ ಸಾಮಾನ್ಯವಾದ ಶಾಸ್ತ್ರಶಬ್ದಕ್ಕೆ ಪ್ರಕರಣಾನುಸಾರ ಪಂಚರಾತ್ರಶಾಸ್ತ್ರರೂಪ ವಿಶೇಷ ಪರತ್ವವನ್ನು ಪ್ರಾಮಾಣಿಕರಾದ ಶಾಸ್ತ್ರಜ್ಞರು ಒಡಂಬಟ್ಟು ಪಂಚರಾತ್ರ ಶಾಸ್ತ್ರಸಿದ್ಧಿರಹಿತರಾದ ಶಾಸ್ತ್ರಸ್ಥರ ದೀಕ್ಷಿತರಿಂದಲೂ ಸಾಮಾನ್ಯತಃ ಪಂಚರಾತ್ರಶಾಸ್ತ್ರವಿಹಿತ ದೀಕ್ಷಾರಹಿತರಾದವರಿಂದಲೂ ಬಿಂಬಾದಿಗಳು ಸ್ಪರ್ಶಿಸಲ್ಪಟ್ಟರೂ ಗರ್ಭಗೇಹ ಪ್ರವೇಶಿಸಲ್ಪಟ್ಟರೂ ದೋಷವೆಂದು ಅರ್ಥವನ್ನು ಹೇಳಬೇಕು ಇಲ್ಲಿ ಅವಿದ್ವದ್ಭಿಃ ಎನ್ನುವದಕ್ಕೆ ಏತಾದೃಶನಿಷೇಧಶಾಸ್ತ್ರ ಮಜಾನದ್ಭಿಃ ಎಂದರ್ಥವು ಅಶಾಸ್ತ್ರ ಸಂಸಿದ್ಧ ದೀಕ್ಷಿತರು ತದ್ವಿಧಾನಾದೀಕ್ಷಿತರಲ್ಲಿ ಅಂತರ್ಭೂತರಾದರೂ ಗೋಬಲೀವರ್ದನ್ಯಾಯದಿಂದ

"ವಿಷ್ಣುರ್ನಾಮಾ ಸ ವೇದೇಷು ವೇದಾನ್ತೇಷು ಚ ಗೀಯತೇ"

ಇತ್ಯಾದಿಗಳಂತೆ ಅದೀಕ್ಷಿತ ಪದವು ಅಶಾಸ್ತ್ರಸಂಸಿದ್ಧದೀಕ್ಷಿತ ವ್ಯತಿರಿಕ್ತಪರವಾಗುವಕಾರಣ ಪೃಥಙ್ನಿರ್ದೇಶವು ಬಾಧಕವಲ್ಲ ಈ ವಚನಕ್ಕೆ ಪ್ರಾಚೀನರಾದ ಸಂಗ್ರಹಕಾರರು ಮತ್ತೊಂದು ವಿಧವಾಗಿ ವ್ಯಾಖ್ಯಾನವನ್ನು ತೋರಿಸಿರುವರು. ಹ್ಯಾಗಂದರೆ-ಅಶಾಸ್ತ್ರಸಂಸಿದ್ಧೈಃ ಶಾಸ್ತ್ರಾನನುಮತೈಃದೀಕ್ಷಿತತ್ವಬ್ರಾಹ್ಮಣತ್ವಾದಿ ಗುಣವತ್ತಾಯಾಮಪಿ ಅನಧಿಕಾರಿತ್ವೇನ, ನೈವಾಧಿಕಾರೀಸನ್ಯಾಸೀ ಬ್ರಹ್ಮಣೋವ್ಯಕ್ತಲಕ್ಷಣಾಃ, ಇತ್ಯಾದಾವುಕ್ತೈಃ ತದ್ವಿಧಾನತಃ ಶಾಸ್ತ್ರವಿಧಾನೇನ ದೀಕ್ಷಿತೈಃ ಸಂನ್ಯಾಸ್ಯಾದಿಭಿಸ್ಸ್ಪೃಷ್ಟೇ ಅದೀಕ್ಷಿತೈರ್ವಾ ಸ್ಪೃಷ್ಟೇಬಿಂಬೆ ಏವಂ ಗರ್ಭಗೇಹೆ ಪ್ರವಿಷ್ಟೇ ಇತ್ಯಾದಿ

ಸಂನ್ಯಾಸಿಗಳು ಪರಾರ್ಥಬಿಂಬ ಪೂಜಾದಿಗಳಲ್ಲಿ ಅನಧಿಕಾರಿಗಳೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದರಿಂದ ಅಂಥಾ ಸನ್ಯಾಸಿಗಳು ಶಾಸ್ತ್ರಪ್ರಕಾರ ದೀಕ್ಷಿತರಾಗಿದ್ದಾಗ್ಯೂ ಅವರು ಮತ್ತು ಅದೀಕ್ಷಿತರು ಬಿಂಬಾದಿಗಳನ್ನು ಸ್ಪರ್ಶಿಸಿದರೂ ಗರ್ಭಗೇಹವನ್ನು ಪ್ರವೇಶಿಸಿದರೂ ದೋಷವೆಂದುನ್ನೂ ಅದಕ್ಕಾಗಿ ಪ್ರಾಯಶ್ಚಿತ್ತವು ನಡಿಸಬೇಕೆಂದುನ್ನು ಅದರ ತಾತ್ಪರ್ಯವು ಈ ವ್ಯಾಖ್ಯಾನದಲ್ಲಿ ಗೋಬಲೀವರ್ದನ್ಯಾಯಾನುಸರಣಮಾಡತಕ್ಕ ಆವಶ್ಯಕತೆಯೂ ಇಲ್ಲ. ಹೀಗೆ ಈ ವಚನಾರ್ಥವು ಸ್ಪಷ್ಟವಾಗಿರುವುದರಿಂದ ಈವಚನ ವಿಷಯವಾಗಿ ಇವರು ಬರೆದಿರುವ [“ ಮತ್ತು ಈ ವಚನಗಳು ಕೆಲವು ಅನ್ವಿತಾರ್ಥಕಗಳಾಗಿವೆ ಅದು ಯಾವನಂದರೆ— (ಸ್ಪೃಷ್ಟೇತ್ವಶಾಸ್ತ್ರಸಂಸಿದ್ಧೈಃ) ಎಂಬುವ ವಚನಕ್ಕೆ ಏನು ಅರ್ಥವು ಅಶಾಸ್ತ್ರಸಿದ್ಧರಾದ ದೀಕ್ಷಿತರಿಂದಲೂ ( ತದ್ವಿಧಾನತಃ ) ಅಂದರೆ-ಅಶಾಸ್ತ್ರಸಂಸಿದ್ಧರಾದ ದೀಕ್ಷಿತರ ವಿಧಿಯಿಂದ ( ಅದೀಕ್ಷಿತೈಃ ) ದೀಕ್ಷಾಬದ್ಧರಲ್ಲದೆ ಇರುವಂಥಾ ವಿದ್ವಾಂಸರುಗಳಿಂದಲೂ ಮೂಲಬಿಂಬಾದಿಗಳು ಸ್ಪೃಶಿಸಲ್ಪಟ್ಟರೂ ಗರ್ಭಗೃಹಪ್ರವೇಶ ಮಾಡಲ್ಪಟ್ಟರೂ ಪರಚಕ್ರಭಯವೆಂದು ಅರ್ಥವಾಗುವದು ಪ್ರಕೃತದಲ್ಲಿ ಪೂಜೆಮಾಡತಕ್ಕ ಅರ್ಚಕನಿಗೂ ಈ ಅರ್ಥದಿಂದಲೇ ದೇವರ ಸಮೀಪಕ್ಕೆ ಪ್ರವೇಶಮಾಡುವದೇ ದುರ್ಲಭವಾಗುವದು. ಹ್ಯಾಗಂದರೆ-ಈಗ ಪೂಜೆಮಾಡುವ ಅರ್ಚಕನು ಅಶಾಸ್ತ್ರಸಂಸಿದ್ಧದೀಕ್ಷಿತನೆ, ಅಥವಾ ಆ ವಿಧಿಯಿಂದ ಅದೀಕ್ಷಿತನೆ ? ಉಭಯಥಾಪಿ ಇವನಿಗೆ ದೇವರನ್ನ ಸ್ಪರ್ಶಮಾಡುವದಕ್ಕೇನೇ ಅಧಿಕಾರವಿಲ್ಲದೆ ಹೋಯಿತು. ಲೋಕದಲ್ಲಿ ಎಲ್ಲಾಮನುಷ್ಯರು ಅಶಾಸ್ತ್ರಸಂಸಿದ್ಧದೀಕ್ಷಿತ, ಅಥವಾ ಅಂಥಾವಿಧಿಯಿಂದ ಅದೀಕ್ಷಿತ ಈ ಇಬ್ಬರಲ್ಲಿ ಒಬ್ಬನಾಗಿಯೇ ಹೊರ್ತು ಇಬ್ಬರಿಗೆ ಅತಿಕ್ರಮಿಸಿರುವದಿಲ್ಲ. ಇವರಿಬ್ಬರಿಗೂ ದೇವರನ್ನ ಸ್ಪೃಶಿಸುವ ಅಧಿಕಾರವಿಲ್ಲದಪಕ್ಷದಲ್ಲಿ ಯಾರು ಸ್ಪರ್ಶಮಾಡಬೇಕೋ ತಿಳಿಯದು

ಹಾಗಲ್ಲವು (ತದ್ವಿಧಾನತಃ) ಅಂದರೆ ಪಾಂಚರಾತ್ರಾಗಮ ವಿಧಿಯಿಂದ (ಅದೀಕ್ಷಿತೈಃ) ಎಂದು ಅರ್ಥಮಾಡೋಣವೆಂದರೆ ; ತಚ್ಛಬ್ದಕ್ಕೆ ಪೂರ್ವದಲ್ಲಿ ಹೇಳಲ್ಪಟ್ಟಿರುವ ವಸ್ತುವೇ ಅರ್ಥವೆಂದು ಸಕಲ ಶಾಸ್ತ್ರಗಳೂ ಹೇಳುತ್ತಿರುವದ್ದರಿಂದ ತಚ್ಛಬ್ದಕ್ಕೆ ಅದಕ್ಕೆ ಪೂರ್ವದಲ್ಲಿ ಹೇಳಲ್ಪಟ್ಟಿರುವ ಅಶಾಸ್ತ್ರಸಂಸಿದ್ಧದೀಕ್ಷಿತ ಪರತ್ವವನ್ನ ಹೇಳಬೇಕೇ ಹೊರ್ತು ಇತರಾರ್ಥಕತ್ವವನ್ನು ಹೇಳುವದಕ್ಕೆ ಶಾಸ್ತ್ರಜ್ಞರಿಗೆ ಅವಕಾಶವಿಲ್ಲವು ಪೂರ್ವದಲ್ಲಿ ಪಾಂಚರಾತ್ರ ತಂತ್ರವಾಚಕ ಪದವಿಲ್ಲವಾದ್ದರಿಂದ (ತದ್ವಿಧಾನತಃ)ಅಂದರೆ ಪಾಂಚರಾತ್ರಾಗಮ ತಂತ್ರವಿಧಿಯಿಂದ ಎಂದು ಅರ್ಥವಾಗಲಾರದು. ]'' ಎಂಬ ಆಕ್ಷೇಪಗಳು ಶುದ್ಧವಾಗಿ ಅಸಂಗತೆಗಳು ಎಂದು ವಿದ್ವಾಂಸರು ತಿಳಿಯದೇ ಇರಲಾರರು. ಅಶಾಸ್ತ್ರಸಂಸಿದ್ಧಪದದಲ್ಲಿ ಶಾಸ್ತ್ರಪದದಿಂದ ಪಂಚರಾತ್ರಶಾಸ್ತ್ರವು ವಿವಕ್ಷಿತವಾಗಿರುವದೆಂದು ನಿರೂಪಿಸಿರುವೆವು. ಹಾಗಾದರೆ ಪೂರ್ವಪ್ರಕೃತವಾದ ಪಂಚರಾತ್ರಶಾಸ್ತ್ರವು ತತ್ಪದಕ್ಕೆ ಅರ್ಥವಾಗುವದಕ್ಕೆ ಯಾವ ಶಾಸ್ತ್ರಬಾಧೆ ಇರುವದೋ ಅದನ್ನು ಶಾಸ್ತ್ರಜ್ಞರು ಯೋಚಿಸಬೇಕು

"ಅವಿದ್ಯಾಸ್ತಮಯೋಮೋಕ್ಷ ಸಾ ಸಂಚಬಂಧ ಉದಾಹೃತಃ'' ಇತ್ಯಾದಿಗಳಲ್ಲಿ ಅಪ್ರಧಾನಪರಾಮರ್ಶಕತ್ವವನ್ನು ಇವರೇ ಸ್ವೀಕರಿಸಬೇಕಾಗಿರುವದರಿಂದ ತತ್ಪದಕ್ಕೆ ಪ್ರಧಾನಪರಾಮರ್ಶಿತ್ವನಿಯಮವನ್ನು ಸುತರಾಂ ಇವರು ಸ್ವೀಕಾರಮಾಡುವದಕ್ಕೆ ಆಗುವದಿಲ್ಲ

ಅನಂತರ [ "ಮತ್ತು ಅನ್ಯೈಸ್ತಂತ್ರೈರ್ದ್ವಿಜಶ್ರೇಷ್ಠ ನಿತ್ಯಂನೈಮಿತ್ತಿಕಂತುವಾ | ಅರ್ಚನಂಧನಲೋಭಾದ್ವಾ ಮೋಹಾದ್ವಾನತುಕಾರಯೇತ್ ‖ ಯೋಮೋಹಾದ್ಯದಿ ಕುರ್ವೀತ ತತ್ಪೂಜಾ ಸಂಕರೋಭವೇತ್ | ಕ್ರಿಯಾಸಂಕರದೂಷಣ ರಾಜರಾಷ್ಟ್ರಂ ವಿನಶ್ಯತಿ ''

ಎಂದು ಇದೆ ಇದರಲ್ಲಿ 'ಯೋಮೋಹಾದ್ಯದಿ ' ಅನ್ನುವ ವಚನಕ್ಕೆ ಏನು

ಅರ್ಥವು ? ಯಃ- ಯಾವಪುರುಷನು, ಮೋಹಾತ್- ಅಜ್ಞಾನದಿಂದ, ಅನ್ಯ ತಂತ್ರೈ ರರ್ಚನಂ ಎಂದು ಅಧ್ಯಾಹಾರಮಾಡಿ ಆ ಪದಕ್ಕೆ ಇತರತಂತ್ರದಿಂದ ಅರ್ಚನೆಯನ್ನು, ಕುರ್ವೀತಯದಿ- ಮಾಡಿದ್ದೇಆದರೆ, ತತ್- ಅದು, ಪ್ರಜಾಸಂಕರಃಭವೇತ್- ಪ್ರಜಾಸಂಕರವಾಗುವದು ಎಂದು ಅರ್ಥ ಹೇಳಬೇಕಷ್ಟೆ. ಯಚ್ಛಬ್ದ ಪುಲ್ಲಿಂಗಪ್ರಥಮಾಂತವಾಗಿರುವದರಿಂದ ನಪುಂಸಕಲಿಂಗವಾದ ತಚ್ಛಬ್ದಕ್ಕೆ ಏನು ಅರ್ಥ ಹೇಳಬೇಕೋ ಪ್ರಜಾಸಂಕರವೆಂಬ ಗುಣವಾಚಕಪದಕ್ಕೂ ಕ್ರಿಯಾನ್ವಯಿಯಾದ ಗುಣವಾಚಕವಾದ ಯಚ್ಛಬ್ದದಿಂದ ಹೇಳಲ್ಪಡುವ ಪುರುಷನು ಹ್ಯಾಗೆಪ್ರಜಾಸಾಂಕರ್ಯರೂಪವಾದನೋ ತಿಳಿಯದು. ಇಂಥಾ ಅನನ್ವಿತವಾದ ವಚನವನ್ನ ಪ್ರಮಾಣವೆಂದು ವಿದ್ವಾಂಸರು ಹ್ಯಾಗೆ ಒಪ್ಪಿದರೋ ಆಶ್ಚರ್ಯಪಡಬೇಕಾಗಿದೆ ಇಷ್ಟು ಶ್ರಮಪಟ್ಟರೂ ಏನೂ ಪ್ರಕೃತೋಪಯೋಗವಿಲ್ಲವು ,, ] ಎಂದು ಬರದಿರುತ್ತಾರೆ ಇದು ಪದಚ್ಛೇದಮಾಡಿಕೊಳ್ಳುವ ಶಕ್ತಿಕೂಡಾ ಇಲ್ಲದವರು ಮಾಡತಕ್ಕವ್ರಲಾಪವು ಹ್ಯಾಗಂದರೆ- ' ಯಃ ಮೋಹಾತ್ ಕುರ್ವೀತ ಯದಿ ತತ್ಪ್ರಜಾ ತಸ್ಯಪ್ರಜಾ ಕರ್ತರಿ ಷಷ್ಠೀ ತತ್ಕರ್ತೃಕಪ್ರಜಾ ಸಂಕರಃ ಸಂಕೀರ್ಯತೆ ಇತಿಸಂಕರಃ ಸಂಕೀರ್ಣರೂಪಾಭವೇತ್ ಎಂದು ಅರ್ಥವು ಪ್ರಜೆಯು ಶುದ್ಧವೆಂದುನ್ನೂ ಸಂಕರವೆಂದುನ್ನೂ ಎರಡುವಿಧವಾಗಿ ಶಾಸ್ತ್ರದಲ್ಲಿ ನಿರೂಪಿಸಲ್ಪಟ್ಟಿರುತ್ತೆಯಷ್ಟೆ ಅನ್ಯತಂತ್ರದಿಂದ ಮಾಡುವ ಪ್ರಜೆಯು ಸಂಕರವಾಗುವದೆಂದು ಇದಕ್ಕೆ ಅರ್ಥವು ಸ್ಪಷ್ಟವಾಗಿರುವದು. ಸಂಕರಪದವು ಸಂಕೀರ್ಣಮಾಣ ಧರ್ಮಿಪರವಾಗಿಯೂ ಕಾವ್ಯಪ್ರಕಾಶಾದಿಗಳಲ್ಲಿ ಪ್ರಯೋಗಿಸಲ್ಪಟ್ಟಿರುತ್ತೆ ಆದ್ದರಿಂದವಿದ್ವಾಂಸರು ಇದನ್ನ ಪ್ರಮಾಣವೆಂದು ಸ್ವೀಕರಿಸುವದಕ್ಕೆ ಯಾವದೋಷವೂ ಇಲ್ಲ ಪ್ರಾಮಾಣಿಕ ಗ್ರಂಥಗಳಲ್ಲಿಇರುವ ವಚನಗಳಿಗೆ ಅರ್ಥವು ಅವ್ಯುತ್ಪನ್ನರಿಗೆ ತಿಳಿಯದೆ ಇರುವದು ಆ ವಚನಗಳ ಪ್ರಾಮಾಣ್ಯಕ್ಕೆಭಂಜಕವಲ್ಲವು ಈ ಪರಮಪುರುಷಸಂಹಿತಾವಚನಗಳ ಪ್ರಯೋಜ

ನವ್ರುಅದೀಕ್ಷಿತರಾದವರು ಮಾಡುವ ಗರ್ಭಗೃಹಪ್ರವೇಶವನ್ನು ನಿಷೇಧಿಸುವದೇ ಎಂದು ಪೂರ್ವದಲ್ಲಿಯೇಸ್ಪಷ್ಟಪಡಿಸಿರುತ್ತೆ ಆದ್ದರಿಂದಲೆ—

[ "ಪರಮಪುರುಷಸಂಹಿತಾಯಾಂ

ದೀಕ್ಷಾಹೀನೈಸ್ತಥಾಶೂದ್ರೈಃ ಪ್ರತಿಮಾಸ್ಪರ್ಶನಸತಿ।

ತೈರೇವ ಯಾಗಶಾಲಾಯಾಂ ವಿಷ್ಟೈರನ್ಯೈಸ್ತುನಾತಥಾ। ಇತ್ಯಾರಭ್ಯ ದೀಕ್ಷಿತೈರನ್ಯಶಾಸ್ತ್ರೇಷು ಸ್ಪೃಷ್ಟೇಸ್ನಪನಮಾಚರೇತ್॥ ಎಂಬುವವರೆಗೆ ಇರುವ ವಚನಗಳಿಂದಲೂ ಇವರಿಗೆ ಪ್ರಕೃತೋಪಯೋಗವಿಲ್ಲವು ಯಾತ ಕ್ಕೆಂಬರೆ—ಪೂರ್ವದಲ್ಲಿ ಹೇಳಲ್ಪಟ್ಟ (ತಂತ್ರೋಕ್ತೇನಪ್ರಕಾರೇಣ ದೇವ ತಾಯಾಪ್ರತಿಷ್ಠಿತಾ। ಸಾಪಿವಂದ್ಯಾಚನೀಯಾಚ ಪೂಜನೀಯಾಚವೈದಿಕೈಃ) ಎಂಬ ಸ್ಕಾಂದಸೂತಸಂಹಿತಾ ವಚನದಿಂದ ವೈದಿಕರು ತಂತ್ರೋಕ್ತರೀತ್ಯಾ ಪ್ರತಿಷ್ಠಿತವಾದ ಪ್ರತಿಮೆಯನ್ನೂ ಪೂಜೆಮಾಡಬಹುದೆಂದು ಹೇಳಲ್ಪಟ್ಟಿರು ವದ್ದರಿಂದ ಗರ್ಭಗೃಹಪ್ರವೇಶಮಾಡದೇಲೂ ಪ್ರತಿಮೆಯನ್ನು ಸ್ಪೃಶಿಸದೇಲೂ "ಪೂಜಾ" ಎಂಬುವದು ಉಪಪನ್ನವಾಗುವದಿಲ್ಲವಾದ್ದರಿಂದ ಮೀಮಾಂಸಾ ಶಾಸ್ತ್ರದಲ್ಲಿ ಸ್ಥಪತ್ಯಧಿಕರಣದಲ್ಲಿ ಹೇಳಿರುವ ಪ್ರಕಾರ (ನಸ್ತ್ರೀಶೂದ್ರೌ ವೇದಮಧೀಯಾತಾಂ) ಎಂಬ ಸಾಮಾನ್ಯರೂಪವಾಗಿ ನಿಷೇಧಶಾಸ್ತ್ರವಿ ಪ್ಪದ್ಧಗ್ಯೂ (ನಿಷಾದಸ್ಥಪತಿಂಯಾಜಯೇತ್) ಎಂಬ ವಿಧಿಯಿಂದ ನಿಷಾದಸ್ಥ ಪತಿಗೆ ಯಾಗಾಧಿಕಾರ ಬಂದದ್ದರಿಂದ ಈ ಯಾಗಾಧಿಕಾರವು ವೇದಾಧ್ಯಯನ ವಿಲ್ಲದೆ ಇದ್ದರೆ ಉಪಪನ್ನವಾಗುವದಿಲ್ಲವಾದ್ದರಿಂದ (ನಸ್ತ್ರೀಶೂದ್ರೌ) ಎಂಬ ವಿಧಿಯಲ್ಲಿರತಕ್ಕ ಶೂದ್ರಪದಕ್ಕೆ ನಿಷಾದಸ್ಥಪತಿಭಿನ್ನ ಶೂದ್ರಪರತ್ವವನ್ನು ಕಲ್ಪಿಸಿ ನಿಷಾದಸ್ಥಪತಿಗೂ ವೇದಾಧ್ಯಯನವನ್ನು ಹ್ಯಾಗೆ ಸಿದ್ಧಾಂತಿಸಿದಾರೊ ಆ ರೀತಿಯಾಗಿ (ದೀಕ್ಷಾಹೀನೈಸ್ತಥಾಶೂದ್ರೈಃ ಪ್ರತಿಮಾಸ್ಪರ್ಶನೇಸತಿ) ಎಂಬ ಸಾಮಾನ್ಯಶಾಸ್ತ್ರವಿದ್ಧಾಗ್ಯೂ (ತಂತ್ರೋಕ್ತೇನಪ್ರಕಾರೇಣ ದೇವ ತಾಯಾಪ್ರತಿಷ್ಠಿತಾ। ಸಾಪಿವಂದ್ಯಾಚನೀಯಾಚ ಪೂಜನೀಯಾಚವೈದಿಕೈಃ)

ಎಂಬ ವಿಶೇಷ ಶಾಸ್ತ್ರದಿಂದ ವೈದಿಕನಿಗೂ ಆಗಮೋಕ್ತರೀತ್ಯಾ ಪ್ರತಿಷ್ಠಿತ ಪ್ರತಿಮಾಪೂಜಾ ವಿಹಿತವಾದಮೇಲೆ ಅಂಥಾ ಪೂಜೆಯು ಪ್ರತಿಮಾಸ್ಪರ್ಶನ ಗರ್ಭಗೃಹಪ್ರವೇಶವಿಲ್ಲದೇ ಇದ್ದರೆ ಉಪಪನ್ನವಾಗುವದಿಲ್ಲವಾದ್ದರಿಂದ (ದೀಕ್ಷಾ ಹೀನೈರಿ) ಎಂಬುವದಕ್ಕೂ ವೈದಿಕಭಿನ್ನರಾದ ದೀಕ್ಷಾಹೀನರಾದ ಸ್ತ್ರೀ ಶೂದ್ರಾದಿ ಪರತ್ವವನ್ನು ಅಗತ್ಯಾ ಹೇಳಬೇಕಾಗಿರುವದ್ದರಿಂದ ವೈದಿಕಶಿರೋ ಮಣಿಗಳಿಗೆ ಗರ್ಭಗೃಹಪ್ರವೇಶವೂ ಪ್ರತಿಮಾಸ್ಪರ್ಶನವೂ ಈ ವಚನಗಳಿಂದ ನಿಷಿದ್ಧವಾದ್ದೆಂದು ಹೇಳುವದಕ್ಕೆ ಯಾರಿಗೂ ಸಾಧ್ಯವಾಗಿಲ್ಲ ಆದ್ದರಿಂದ ಈ ವಚನಗಳೆಲ್ಲಾ ಪ್ರಕೃತೋಪಯೋಗಿಗಳಲ್ಲವು. "] ಎಂದು ಬರದಿರುವದು ಅಸಂಗತವೆಂದು ಸರ್ವರೂ ಅರಿಯದೇ ಇರಲಾರರು

"ತಂತ್ರೋಕ್ತೇನೆತ್ಯಾದಿ" ವಚನವು ಸರ್ವಥಾ ಇವರಿಗೆ ಬಾಧಕ ವಾಗಿರುತ್ತೆ ಎಂಬದೆ ಮೊದಲಾದ ವಿಷಯವು ಪೂರ್ವದಲ್ಲಿಯೆ ನಾವು ನಿರೂಪಿಸಿರುವದರಿಂದ ಆವಚಲಬಲದಿಂದ ಪಂಚರಾತ್ರ ವಚನಗಳಿಗೆ ದೀಕ್ಷಾಹೀನ ಸ್ತ್ರೀ ಶೂದ್ರಾದಿ ಪರತ್ವವನ್ನು ಕಲ್ಪಿಸುವದಕ್ಕೆ ಆಗುವದಿಲ್ಲವೆಂಬುವದು ವ್ಯಕ್ತವಾಗಿರುವದು

ಮತ್ತು-ತಂತ್ರೋಕ್ತಪ್ರತಿಷ್ಠೆಯು ಗೃಹಾರ್ಚಾಪ್ರತಿಷ್ಠೆಯೆಂದನ್ನೂ ಆಲಯಾರ್ಚಾ ಪ್ರತಿಷ್ಠೆಯೆಂದನ್ನು ಎರಡು ವಿಧವಾಗಿರುವದು ಗರ್ಭಗೃಹ ಪ್ರವೇಶವಿಲ್ಲದೇ ಇದ್ದಾಗ್ಯೂ ಆಲಯಸ್ಥ ಬಿಂಬಸ್ಪರ್ಶವಿಲ್ಲದೇ ಇದ್ದಾಗ್ಯೂ ತಂತ್ರೋಕ್ತಪ್ರಕಾರ ಪ್ರತಿಷ್ಠಿತವಾದ ಗೃಹಾರ್ಚಾಬಿಂಬರೂಪದೇವತೆಯ ಪೂಜೆಯು ಸಂಭವಿಸುವದಾದ್ದರಿಂದ ಉದಾಹೃತ ಸೂತಸಂಹಿತಾವಚನವು ಗೃಹಾರ್ಚಾಪರವಾಗಿ ಉಪಪನ್ನವಾಗಿ ಅನ್ಯಥಾಸಿದ್ಧವಾಗಿರುವದು ಆದ್ದ ರಿಂದ ಸ್ವಾಪತ್ಯಧಿಕರಣದಂತೆ ಅನ್ಯಥಾನುಪಪತ್ತಿ ಇಲ್ಲದಕಾರಣ ಅದೀಕ್ಷಿತ ರಿಗೆ ಆಲಯಸ್ಥ ಗರ್ಭಗೃಹಪ್ರವೇಶ ಪ್ರತಿಮಾಸ್ಪರ್ಶಾದಿಗಳನ್ನು ನಿಷೇಧಿ ಸುವ ಅನ್ಯಥಾಸಿದ್ಧವಾದ ಅನೇಕ ವಚನಗಳಿರುವಲ್ಲಿ ಅನ್ಯಥಾಸಿದ್ಧವಾದ ಸೂತಸಂಹಿತಾವಚನದಿಂದ ಅದೀಕ್ಷಿತರಿಗೆ ಗರ್ಭಗೃಹ ಪ್ರವೇಶಾದಿಗಳು ಅನಿ

ಸಿದ್ಧಗಳೆಂದು ಹೇಳುವದು ಶಾಸ್ತ್ರಜ್ಞರಿಗೆ ಅಸಾಧ್ಯವು.
ಮತ್ತು-ಉದಾಹರಿಸುವ ಅದೀಕ್ಷಿತರು ಗರ್ಭಗೃಹ ಪ್ರವೇಶಾದಿಗಳನ್ನು ಮಾಡಕೂಡದೆಂಬ ಶ್ರೀಕರ ವಚನಗಳಿಗೆ ಸಂಕೋಚ ಕಲ್ಪಿಸುವದಕ್ಕಿಂತಲೂ ಮೇಲೆ ಹೇಳಿದ ವಚನದಲ್ಲಿ ತಂತ್ರಪದಕ್ಕೆ ಪಾಂಚರಾತ್ರ ತಂತ್ರಾತಿರಿಕ್ತ ತಂತ್ರ ಪರತ್ವವನ್ನು ಹೇಳಿ ಸೂತಸಂಹಿತೆಯಲ್ಲಿನ "ತಂತ್ರೋಕ್ತೇನ" ಎಂಬ ಒಂದು ವಚನಕ್ಕೆ ಮಾತ್ರ ಸಂಕೋಚವನ್ನು ಕಲ್ಪಿಸುವದು ಗೌರವ ದೋಷಾಪಾದಕವಲ್ಲವೇ ಇರುವದು ಆದ್ದರಿಂದ ಇವರು ವೈದಿಕ ಶಿರೋಮಣಿಗಳೆಂಬುವರಿಗೂ ಈ ವಚನಗಳಿಂದ ಗರ್ಭಗೃಹಪ್ರವೇಶಾದಿಗಳು ನಿಷಿದ್ಧವಾಗುವದಕ್ಕೆ ಸಂದೇಹವಿಲ್ಲ

ಈರೀತಿಯಾಗಿ ಇದುವರಿಗೂ ಇವರು ಬರೆದ ಅಂಶಗಳು ಸರ್ವಥಾ ಅಸಂಗತಗಳೆಂದು ನಾವು ತೋರುವ ಯುಕ್ತಿಗಳಿಂದಲೇ ಇನ್ನುಮೇಲೆ ಇವರು ಬರೆದಿರುವದು ಅತ್ಯಸಂಗತವೆಂದು ಬುದ್ಧಿಶಾಲಿಗಳಿಗೆ ಗೊತ್ತಾಗುವದು ಆದರೂ ಎಲ್ಲರಿಗೂ ಇವರ ಪಾಂಡಿತ್ಯ ಪ್ರಕಾಶವನ್ನು ಮಾಡುವದಕ್ಕಾಗಿ ಮೇಲೆ ಬರೆದಿರುವದನ್ನು ವಿಚಾರಿಸುವೆವು

[ ಮತ್ತು ಎಲ್ಲಾ ದೇವಾಲಯಗಳಲ್ಲಿಯೂ ಅರ್ಚಕೇತರರಾದ ಪರಿಚಾರಕರು ಗರ್ಭಗೃಹಪ್ರವೇಶಮಾಡುವದು ಪ್ರಸಿದ್ಧವಾಗಿದೆ ಕೆಲವು ಸಂದರ್ಭಗಳಲ್ಲಿ ದೇವರನ್ನು ಇವರು ಸ್ಪರ್ಶಮಾಡುತ್ತಾರೆ ] ಎಂದು ಬರೆದಿರುತ್ತಾರೆ ಆದರೆ ಇವರೇ (೨೦) ನೇ ಪೇಜಿನಲ್ಲಿ "ಪ್ರಾಯಶಃ ಶ್ರೀವೈಷ್ಣವರೆಲ್ಲರೂ ಪಾಂಚರಾತ್ರಾದ್ಯಾಗಮೋಕ್ತ ಪ್ರಕಾರವಾದ ಕೆಲವು ದೀಕ್ಷಾಬದ್ಧರೆಂದು ಹೇಳಬಹುದಾಗಿದೆ" ಎಂದು ಬರೆದಿರುತ್ತಾರೆ. ಇವರು ಬರೆಯುವಂತೆಯೇ ಪರಿಚಾರಕರಾದ ಶ್ರೀವೈಷ್ಣವರೂ ದೀಕ್ಷಿತರಾಗಿರುವಲ್ಲಿ "ಅದೀಕ್ಷಿತೈಃ" ಇತ್ಯಾದಿವಚನಗಳಿಗೆ ಪರಿಚಾರಕರು ಹ್ಯಾಗೆ ವಿಷಯರಾದರು ಹೀಗೆ ತಾವು ಮುಂದೆ ಹಿಂದೆ ಬರೆಯುವದಕ್ಕೂ ವಿರೋಧ ಬರುವದನ್ನೇ ಇವರು ಯೋಚಿ

ಸುವದಿಲ್ಲವೆಂಬುವದನ್ನ ಪ್ರಾಜ್ಞರು ಪರಾಮರ್ಶಿಸಬೇಕು. ಮತ್ತು ಪಾರಮೇಶ್ವರ ಸಂಹಿತೆಯಲ್ಲಿ ಪರಿಚಾರಕ ಸಂಖ್ಯೆಯನ್ನು ಹೇಳುವ ಪ್ರಕರಣದಲ್ಲಿ ಏಕಾಯನಾದೀಕ್ಷಿತಾನಾ ಚತ್ವಾರೋ ಮಾತ್ರಯೋ ಪಿನಾ | ಏವಂ ಭಾರಾನುಸಾರೇಣಕ್ರಮೇಣ ಪರಿವರ್ಧಯೇತ್ | ..........ಏಕಸ್ತು ಕಲ್ಪನೀಯಸ್ತುತಾಂಬೂಲುಪ್ರೂಪಸಾಧನೆ | ಏಕಸ್ತು ಕಲ್ಪನೀಯೋಂತಃ ಪರಿಚಾರಕ ಕರ್ಮಣಿ | ...... ಚತ್ವಾರಸ್ತು ತದಾತ್ವಂತಃ ಪರಿಚಾರಕ ಕರ್ಮಣಿ | ಇತ್ಯಾದಿ ವಚನಗಳಲ್ಲಿ ಅಂತಃಪರಿಚಾರಕ ಬಹಿಃಪರಿಚಾರಕ ಭೇದ ವಿಧಾನವಿರುವದ್ದರಿಂದಲೂ,

ಪಾಕಸ್ನಾನಾಚ್ಚ ಭಾಂಡಾನ್ವಾವಾರಿಭಿಃಕ್ಷಾಳಿತಾನ್ಯಹಿಃ |
ಭಸ್ಮನಾ ಚ ಚತುರ್ದಿಕ್ಷು ಕೃತೋರ್ಧ್ವಾಕಾರ ಪುಂಡ್ರಕಾಃ |
ಪರಿಚರ್ಯಾಪರಾವಿಪ್ರಾನುಂಟಪೆ ಮಂದಿರೆಪಿನಾ |
ದೇವಸ್ಯದಕ್ಷಿಣೆಪಾರ್ಶ್ವೆಸೀತ್ವಾ ಫಲಕಭೂಮಿಷು |

ಇತ್ಯಾದೀಶ್ವರಸಂಹಿತಾದಿ ವಚನಗಳಿಂದಲೂ ಪರಿಚಾರಕರು ಗರ್ಭಗೃಹವನ್ನು ಪ್ರವೇಶಿಸುವದು ವಿಹಿತವಾಗಿರುವದ್ದರಿಂದ ಪರಿಚಾರಕರು ಅರ್ಚಕೇತರರಾದಾಗ್ಯೂ ಅವರ ಗರ್ಭಗೃಹ ಪ್ರವೇಶವು ನಿಷೇಧವಿಷಯವಾಗಲಾರದು. ಪರಿಚಾರಕರು ಬಿಂಬವನ್ನು ಎಂದಿಗೂ ಸ್ಪೃಶಿಸುವದಿಲ್ಲ. [ಅರ್ಚಕರಿಗೆ ಹೆಚ್ಚಾಗಿ ದುಡ್ಡು ಕೊಟ್ಟರೆ ದೇವರ ದರ್ಶನವನ್ನು ಮಾಡತಕ್ಕವರುಸಹಾ ಗರ್ಭಗೃಹ ಪ್ರವೇಶಮಾಡುತ್ತಾರೆ] ಎಂದು ಬರೆದಿರುತ್ತಾರೆ. ಇದು ದುಡ್ಡು ಬರುವದಕ್ಕೋಸ್ಕರ ಯಾವಕೆಲಸವನ್ನಾದರೂ ನಿರ್ಲಜ್ಜರಾಗಿ ಮಾಡುವದಕ್ಕೆ ಉಪಕ್ರಮಿಸಿರುವ ತಮ್ಮಂಥಾ ಜನಗಳ ಗುಣವನ್ನು ಅರ್ಚಕರಲ್ಲಿ ಆರೋಪಿಸಿ ಬರದಿರುವದೇ ಹೊರತು ಬೇರೆಯಿಲ್ಲ. [ಇಷ್ಟೇ ಅಲ್ಲವು ಈ ದೇವರ ಉತ್ಸವವು ನಡೆಯುವಾಗ್ಯೆ ಶ್ರೀರಂಗಪಟ್ಣದಲ್ಲೂ ಮೇಲುಕೋಟೆ ಮೊದಲಾದ ಯಲ್ಲಾ ಸ್ಥಳದಲ್ಲಿಯೂ ಸಾತಾನಿಯವರು ಸಹ ದೇವರನ್ನು ಹೊರುತ್ತಾರೆ. ಇವರ ವಚನಗಳಲ್ಲಿ "ಪ್ರಭಾಪೀಠಾಸ್ತ್ರಗೆ

ಹಂತು ಸಮಮೆ ತಚ್ಚ್ಛತುಷ್ಟಯಂ " ಎಂಬದಾಗಿರುವದ್ದರಿಂದ ಅಂಥಾಪೀಠಾ ದಿಗಳಿಗೆ ಶೂದ್ರಾದಿ ಸ್ಪರ್ಶನವಾಗುವದರನ್ನ ಶ್ರೀವೈಷ್ಣವ ಮಹಾಜನರು ಹ್ಯಾಗೆ ಒಪ್ಪಿಕೊಳ್ಳಂಡಿರುತ್ತಾರೊ ತಿಳಿಯದು ] ಎಂದು ಬರದಿರುತ್ತಾರೆ. ಇದು ಅಜ್ಞಾಪ್ರಲಾಪವು ಮೇಲೆ ಹೇಳಿದ ವಚನದಲ್ಲಿ ಪೀಠಶಬ್ದಕ್ಕೆ ಶಿರಃ ಪ್ರಭೃತಿ ಪಾದಾನ್ತವಾದ ಪ್ರತಿಮಾಪದಾರ್ಥಕ್ಕೆ ಸಾಕ್ಷಾತ್ ಆಧಾರವಾದ ಪೀಠ ವೇ ಅರ್ಥವು. ಆದ್ದರಿಂದಲೇ " ಪ್ರತಿಮಾಚೈವ ತತ್ಪೀಠಂ " ಎಂದು ಪಾರಮೇಶ್ವರದಲ್ಲಿ ಪೀಠಸಾಮಾನ್ಯವನ್ನು ಪರಿಗಣಿಸದೇ ತತ್ಪೀಠಶಬ್ದದಿಂದ ಪ್ರತಿಮಾವಿನಾಭೂತ ಪೀಠವೇಪರಿ ಗಣಿಸಲ್ಪಟ್ಟಿರುವದು ಪ್ರತಿಮಾವಿಷಯ ದಲ್ಲಿ ಹ್ಯಾಗೋ ಹಾಗೆಯೇ ಅಂಥಾಪೀಠವಿಷಯದಲ್ಲಿಯೂ ಶಾಸ್ತ್ರದಲ್ಲಿ ವಿಶೇಷ ನಿಯಮಗಳು ಹೇಳಲ್ಪಟ್ಟಿರುತ್ತೆ. ಅಂಥಾ ಪೀಠಾದಿಗಳನ್ನ ಶೂದ್ರಾದಿಗಳು ಎಂದಿಗೂ ಸ್ಪೃಶಿಸುವದಿಲ್ಲ.

ಈಶ್ವರಸಂಹಿತಾಯಾಂ ಮಹೋತ್ಸವಾಧ್ಯಾಯೆ ಏಕಾದಶೇ—

ವಹೇಯುರ್ಬ್ರಾಹ್ಮಣಾ ಯಾನಂ ಧ್ಯಾಯಂತೊ ವಿಹಗೇಶ್ವರಂ ।

ಅಥವಾ ವೈಷ್ಣವಾ ಶ್ಶೂದ್ರಾ ವಹೇಯುರ್ಭಕ್ತಿಸಂಯುತಾಃ ।

ಇತ್ಯಾದಿವಚನಗಳಿಂದ ಶಾತ್ತಾದ ವೈಷ್ಣವರು ಉತ್ಸವಕಾಲದಲ್ಲಿ ದೇವರ ವಾಹ ನವನ್ನ ವಹಿಸುವದು ಶಾಸ್ತ್ರಿಯವೇ ಆಗಿರುತ್ತೆ

ಈರೀತಿಯಾಗಿ ಶಾಸ್ತ್ರೀಯವಾದ ಪದಾರ್ಥವನ್ನು ಅರಿಯದೆ ಸ್ವೇಚ್ಛ ಯಾಗಿ ಬರೆಯುವರಿಗೆ ದೈವವೇ ವಿವೇಕವನ್ನುಂಟುಮಾಡಬೇಕು ಮತ್ತು ಶಾತ್ತಾದವರು ಪಂಚರಾತ್ರೋಕ್ತವಾದ ವೈಷ್ಣವದೀಕ್ಷೆಯುಳ್ಳವರಾಗಿಯೂ ಇರುತ್ತಾರೆ. ಆದ್ದರಿಂದ ಇವರಂತೆ ಶಾತ್ತಾದವರು ಅದೀಕ್ಷಿತರಾಗಲಾರರು ಎಂಬ ಅಂಶವನ್ನು ಶಾಸ್ತ್ರಜ್ಞರು ಮನಸ್ಸಿನಲ್ಲಿ ತರಬೇಕು ಆದ್ದರಿಂದಲೇ [ " ಇವರು ಉದಹರಿಸುವ ಶಾಸ್ತ್ರಗಳೆಲ್ಲವು ಒಬ್ಬರಿಗೆ ಅಪಮಾನ ಮಾಡಬೇ ಕೆಂಬ ದುರುದ್ದೇಶಕ್ಕೊಸ್ಕರವೇಹೊರ್ತು ಸ್ವತಃ ಅನುಷ್ಠಾನಕ್ಕೆ ಅಲ್ಲವೆಂದು

ಸ್ಪಷ್ಟವಾಗುತ್ತೆ "] ಎಂದು ಬರೆದಿರುವದು ಅಸಂಗತವಾಗಿರುವದೆಂದು ವ್ಯಾಖ್ಯಾತವಾಯಿತು.

ಪ್ರತ್ಯುತ ಸಂನ್ಯಾಸಿಗಳಿಗಿಂತಲೂ, ಅಧಿಕವಾಗಿ ವೇದೋಕ್ತಕರ್ಮಗಳನ್ನು ಅನುಷ್ಠಿಸುವ ವೈದಿಕರು ಒಬ್ಬರಾದರೂ ಅನುಷ್ಠಾನದಲ್ಲಿ ತರದೇ ಇರುವ "ತಂತ್ರೋಕ್ತೇ" ತ್ಯಾದಿವಚನವನ್ನು ಪ್ರಮಾಣವೆಂದು ಇತರರಿಗೆ ಹೇಳಿ ವಂಚನೆಯಿಂದ ಪ್ರವರ್ತಿಸುವರೇ ಯಲ್ಲ; ಮಠಗಳಿಗಿಂತಲೂ ಅಧಿಕವಾಗಿ ತಾವು ಪ್ರಾಶಸ್ತ್ಯ ಸಂಪಾದಿಸಬೇಕೆಂಬ ದುರಾಶೆಯಿಂದ ಇತರರಿಗೆ ಅಪಮಾನ ಮಾಡುವದಕ್ಕೆ ಉದ್ದೇಶಿಸಿರುವರು. ಮತ್ತು ಅಶಾಸ್ತ್ರೀಯವಾದ ಗರ್ಭಗೃಹ ಪ್ರವೇಶಾದಿಗಳನ್ನು ತಾವು ಮಾಡಿದರೆ ಮಾನವೆಂದನ್ನೂ, ಶಾಸ್ತ್ರೀಯವಾದ ತತ್ಪ್ರಾಯಶ್ಚಿತ್ತವನ್ನು ಇತರರು ಮಾಡಿದರೆ ಅಪಮಾನವೆಂದೂ ನೂ ಬರಿಯುವವರ ವಿಪರೀತಬುದ್ಧಿಯನ್ನು ಎಷ್ಟು ವರ್ಣಿಸಲಾದೀತು. ಶಾಸ್ತ್ರೀಯವಾದ ಸಂಪ್ರೋಕ್ಷಣೆ ಮಾಡಿದ ಮಾತ್ರದಿಂದ ಇತರರಿಗೆ ಏನು ಅಪಮಾನವಾಗುವದೊ ನಾವರಿಯೆವು

[ "ಮತ್ತು ಪಾರಮೇಶ್ವರೆ—

ಪ್ರತಿಮಾಚೈವ ತತ್ಪೀಠಂ ಪ್ರಾಸಾದೋಗರ್ಭಮಂದಿರಂ ।

ವಿಗ್ರಹೋ ದೇವದೇವಸ್ಯ ಸಮವೇತಚ್ಚತುಷ್ಟಯಂ ।

ಎಂಬದಾಗಿದೆ ಇದರಲ್ಲಿ ಮೂಲಪ್ರತಿಮೆ ೧ ಪೀಠ ೧ ಪ್ರಾಸಾದವಂದರೆ ಉಪ್ಪರಿಗೆ ೧ ಗರ್ಭಮಂದಿರ ವಂದರೆ ಗರ್ಭಗೃಹ ೧ ದೇವದೇವಸ್ಯ ವಿಗ್ರಹಃ ಅಂದರೆ ದೇವರವಿಗ್ರಹ ೧ ಎಂದು ೫ ಪದಾರ್ಥಗಳುಇವೆ ಚತುಷ್ಟಯವೆಂದು ಹೇಳಿದೆ ಇದುವಂದು ಅಸಂಗತವು "] ಎಂದು ಬಲವಾದ ಆಕ್ಷೇಪಣೆ ಮಾಡಿರುತ್ತಾರೆ ಇದಕ್ಕೆ ಸಮಾಧಾನವನ್ನು ಇವರಂತೆ ಇರುವ ವಿದ್ವಾಂಸರು ಯಾರೂ ಹೇಳಲಾರರು. ಸಾಮಾನ್ಯಜನರು ಹೇಳುವ ಅರ್ಥವನ್ನು ಇವರು ಪರ್ಯಾಲೋಚಿಸಲಿ, ಪ್ರತಿಮಾ ತತ್ಪೀಠಂ ಪ್ರಾಸಾದಃ ಗರ್ಭಮಂದಿರಂಚ ದೇವ ದೇವಸ್ಯ

ವಿಗ್ರಹಃ ಶರೀರರೂಪಂ. ಅತಏವ ಏತತ್ಪ್ರತಿರೂಪಿಕಾಚತುಷ್ಟಯಂ ಸಮಂ ಅಸ್ಪೃಶ್ಯಸ್ಪೃಷ್ಟ ತತ್ಪ್ರಾಯಶ್ಚಿತ್ತಾರ್ಹತ್ವೇ ಎಂದು ಸಾಮಾನ್ಯವಾಗಿ ತೋರುವ ಅರ್ಥಕ್ಕೆ ಏನು ದೋಷವೋ ಇವರೇ ಯೋಚಿಸಬೇಕು ಪ್ರತಿಮೆ ೧ ನೆ ದನ್ನಾಗಿಯೂ ೪ ನೆಯ ದೇವರವಿಗ್ರಹ ವೆಂಬುದನ್ನು ಬರದಿರುವರು. ಪ್ರತಿಮೆ ಗಿಂತಲೂ ಬೇರೆಯೆಂದು ದೇವರವಿಗ್ರಹವನ್ನು ಬರಿಯುವ ಇವರಬುದ್ಧಿ ಸಾಮರ್ಥ್ಯವು ಅಪಾರವಾದದ್ದು ಉದ್ದೇಶ್ಯ ವಿಧೇಯ ಭಾವವನ್ನರಿತು ಶ್ಲೋಕಾರ್ಥವನ್ನು ಮಾಡಿಕೊಳ್ಳುವ ಪಾಂಡಿತ್ಯವಂತು ಅಸದೃಶವು.

ಮತ್ತು-ಸಂಧ್ಯಾಸ್ನಾನಂ ಜಪೋಹೋಮೋ ದೇವತಾನಾಂಚ ಪೂಜನಂ ।
ಆತಿಥ್ಯಂ ವೈಶ್ವದೇವಂಚ ಷಟ್ಕರ್ಮಾಣಿ ದಿನೇದಿನೇ ॥ ಎಂಬ ಪರಾಶರ ಸ್ಮೃತಿಯಲ್ಲಿ ಸಂಧ್ಯಾದಿ ಷಟ್ಕರ್ಮಗಳನ್ನು ಪರಿಗಣಿಸಿ "ಷಟ್ಕರ್ಮಾಣಿ" ಎಂದುಹೇಳಿ ಇರುವದನ್ನು ವಿಶೇಷಪರಿಶ್ರಮದಿಂದ ಸಂಗಮನ ಮಾಡಿರುವ ಮಾಧವಾಚಾರ್ಯರು ಇವರಷ್ಟು ಧೈರ್ಯವಿಲ್ಲದೆ ಅದನ್ನು ಅಪ್ರಮಾಣವೆಂದು ಹೇಳದೆ ಹಿಂಜರಿದಿದ್ದಕ್ಕೆ ಇವರು ಆಶ್ಚರ್ಯ ಪಡಬಹುದು

ಅನಂತರ [ "ಮತ್ತು ಇವುಗಳೆಲ್ಲಾ ಸಮಾನವಾದ ಪಕ್ಷದಲ್ಲಿ ಪ್ರಾಸಾದಾದಿಗಳಮೇಲೆ ಕಾಕೆ, ಹದ್ದು, ಗೂಬೆ ಮೊದಲಾದ ಅಸ್ಪೃಶ್ಯವಾದ ಜಂತುಗಳು ಕೂತಾಗಲೆಲ್ಲಾ ಪ್ರತಿಮಾದಿಗಳಿಗೆ ಸಂಪ್ರೋಕ್ಷಣೆ ಮಾಡಬೇಕಾಯಿತು ಹಾಗೆ ಯಾಕೆ ಮಾಡಲಿಲ್ಲವೋ ತಿಳಿಯದು ಆದ್ದರಿಂದ ಈ ವಚನವು ಪ್ರಮಾಣವೆಂದು ಹೇಳುವದು ಕಷ್ಟವಾಗಿದೆ" ] ಎಂದು ಬರೆದಿರುತ್ತಾರೆ. ಇವರನ್ನು ಸ್ವಲ್ಪ ವಿಚಾರಿಸುವೆವು. ಉಚ್ಛಿಷ್ಟಾದ್ಯಶುಚಿಸಂಪರ್ಕವುಳ್ಳ ಅನ್ನಾದಿಗಳನ್ನು ಭುಜಿಸಕೂಡದೆಂದು ಇರುವ ಶಾಸ್ತ್ರವನ್ನು ಇವರು ಒಪ್ಪುತ್ತಾರಷ್ಟೆ. ಉಚ್ಛಿಷ್ಟಸ್ಥಳದಲ್ಲಿದ್ದ ಮಕ್ಷಿಕೆಗಳು ಅನ್ನದಮೇಲೆ ಪ್ರಾಯಶಃ ಬಂದು ಕೂತುಕೊಳ್ಳುವದಲ್ಲವೆ ಪ್ರತಿದಿನಸದಲ್ಲಿಯೂ ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಯಾತಕ್ಕೆ ಮಾಡಿಕೊಳ್ಳು

ದಿಲ್ಲ-ಒಂದುವೇಳೆ ಅಶುಚಿಸಂಸ್ಪೃಷ್ಟಮಕ್ಷಿಕಾದಿಸ್ಪರ್ಶ ಅನಿವಾರ್ಯವಾದ ಕಾರಣ ಅದು ನಿಷೇಧಶಾಸ್ತ್ರವಿಷಯವಾಗಲಾರದು ಶಾಸ್ತ್ರವು ಅಶಕ್ಯಾನುಷ್ಠಾನವನ್ನು ಎಂದಿಗೂ ಬೋಧಿಸಲಾರದು ಎಂದು ಇವರು ಹೇಳುವರಾದರೆ ಪ್ರಕೃತದಲ್ಲಿ ಪ್ರಾಸಾದೋಪರಿಭಾಗದಲ್ಲಿ ಪಕ್ಷ್ಯಾದಿ ಸ್ಪರ್ಶಗಳು ಅನಿವಾರ್ಯವಾದ ಕಾರಣ ಅದು ನಿಷೇಧಶಾಸ್ತ್ರವಿಷಯವಾಗಲಾರದು ಎಂದು ಇವರು ಯಾತಕ್ಕೆ ಯೋಚಿಸಲಾರರು ಮತ್ತು—

ಬಿಂಬಮತ್ಯೈಸ್ತು ಸಂಸ್ಪೃಷ್ಟೇ ಮಧ್ಯಮಸ್ನಪನಂಚರೇತ್ ।
ಸ್ಪೃಷ್ಟೇ ನಪಕ್ಷಿಭಿಃಕೈಶ್ಚಿದ್ದೋಷ ಆಯತನೇ ನ ತತ್ ।
ಗೃಧ್ರಕುಕ್ಕುಟಕಾಕಾದ್ಯೈರ್ಬಿಂಬೆ ಸ್ಪೃಷ್ಟೇತು ಪೂರ್ವವತ್ ।

ಇತ್ಯಾದಿ ನಾರದೀಯಸಂಹಿತಾ ವಚನದಿಂದಲೇ ಪ್ರಾಸಾದಕ್ಕೆ ಪಕ್ಷಿಸ್ಪರ್ಶದಲ್ಲಿ ದೋಷವಿಲ್ಲನೆಂದು ಬೋಧಿಸಲ್ಪಟ್ಟಿರುತ್ತೆ ಅದೀಕ್ಷಿತರು ಗರ್ಭಗೃಹವನ್ನು ಪ್ರವೇಶಿಸಬಾರದೆಂಬ ವಿಷಯದಲ್ಲಿ ಅದೀಕ್ಷಿತೈರಿತ್ಯಾದಿ ಪಾಂಚರಾತ್ರಿಕವಚನವೇ ಇರುವದೆಂದು ಪೂರ್ವದಲ್ಲಿಯೇ ಹೇಳಿರುತ್ತೆ.

ಈರೀತಿಯಾಗಿ ನಾವು ಉದಾಹರಿಸಿರುವ ವಚನಗಳನ್ನು ಪ್ರಮಾಣವೆಂದುಹೇಳುವದಕ್ಕೆ ನಿಷ್ಪಕ್ಷಪಾತಿಗಳಿಗೆ ಯಾವಕಷ್ಟವೂ ಇಲ್ಲದೇಯಿರುವದ್ದರಿಂದಲೂ-

ತಂತ್ರೋಕ್ತೇನ ಪ್ರಕಾರೇಣ ದೇವತಾಯಾ ಪ್ರತಿಷ್ಠಿತಾ ।
ಸಾಪಿವಂದ್ಯಾ ಚ ಸೇವ್ಯಾ ಚ ಪೂಜನೀಯಾ ಚ ವೈದಿಕೈಃ ॥

ಎನ್ನುವ ವಚನವು ಪ್ರಕೃತಾನುಪಯುಕ್ತವೆಂದುನ್ನೂ ಇವರ ಇಷ್ಟಾರ್ಥಕ್ಕೆ ಸರ್ವಥಾ ಬಾಧಕವೆಂದುನ್ನೂ ಅನೇಕವಿಧವಾಗಿ ನಾವು ನಿರೂಪಿಸಿರುವದರಿಂದಲೂ-

[ " ಈ ಅರ್ಥದಿಂದಲೇ—

ಅದೀಕ್ಷಿತೈರ್ನರೈರೇವಂ ಸ್ಪೃಶ್ಯತೇ ಯದಿ ದೇವರಾಟ್ ।

ಸರಾಷ್ಟ್ರಂ ನಾಶಯೇತ್ಪೂರ್ವಂ ತದ್ಗ್ರಾಮಂ ಚ ತಥೈವಚ ॥
ತದ್ಗ್ರಾಮಂ ಚ ತಥೈ ಪ್ರೋಕ್ತಂ ತತ್ಕರ್ತಾರಂ ತಥೈವ ಚ ।
ತನ್ಮಂಡಲ ಧಿಪ್ರೋ ರಾಜಾ ವಾಹನಾನಿ ತಥೈವಚ ॥
ಕ್ಷಾಮಂತು ವರ್ಧತೇರಾಷ್ಟ್ರೇ ಧನಧಾನ್ಯ ಗವಾಂತಥಾ ।

ಎಂದು ಮೊದಲುಮಾಡಿ

ತಸ್ಮಾತ್ಸಂಪ್ರೊ ಕ್ಷಣಂ ಕಾರ್ಯಂ ಪ್ರಾಸಾದಪ್ರತಿಮಾದಿಷು ॥

ಎಂಬ ಪರ್ಯಂತ ವಚನಗಳಿಂದಲೇ ಪ್ರಕೃತೋಪಯೋಗವಿಲ್ಲವು ವೈದಿಕರಿಗೆ ತಂತ್ರೋಕ್ತರೀತ್ಯಾ ಪ್ರತಿಷ್ಠಿತ ದೇವತಾಪೂಜೆಯು ವಿಧಿ ಪ್ರಾಪ್ತವಾದಮೇಲೆ ತನ್ನಿರ್ವಾಹಾರ್ಥವಾಗಿ ಗರ್ಭಗೃಹಪ್ರವೇಶ ದೇವತಾಸ್ಪರ್ಶನಾದಿಗಳು ವೈದಿಕನಿಗೆ ವಿಧಿಪ್ರಾಪ್ತವೆಂದೆಣಿಸಬೇಕಾಗಿರುವದ್ದರಿಂದ ಇದರಲ್ಲ ಹೇಳಲ್ಪಟ್ಟ ನಿಷೇಧಗಳೆಲ್ಲವು ವೈದಿಕಭಿನ್ನರಾಗಿಯೂ, ಉಕ್ತದೀಕ್ಷಾಹೀನರಾಗಿಯೂ ಇರತಕ್ಕ ಸ್ತ್ರೀಶೂದ್ರಾದಿಗಳಪರವೆಂದು ಸ್ಪಷ್ಟವಾಗಿ ಸಿದ್ಧಿಸುವದು." ] ಎಂದು ಬರವಿರುವದು ಅಸಂಗತವೆಂದು ಬರದವರೇ ಒಪ್ಪದೇ ಇರಲಾರರು. ಅದೀಕ್ಷಿತಬ್ರಾಹ್ಮಣರು ಸ್ಪೃಶಿಸಿದರೂ ಪ್ರಾಯಶ್ಚಿತ್ತವನ್ನು ಬೋಧಿಸುವ ನಲಕೂಬರ ಸಂಹಿತಾವಚನವು ಮತ್ತು ಸ್ತ್ರೀಶೂದ್ರಸ್ಪರ್ಶಾದಿಗಳಲ್ಲಿ ಪ್ರತ್ಯೇಕವಾಗಿ ಪ್ರಾಯಶ್ಚಿತ್ತವನ್ನು ಬೋಧಿಸುವ ವಚನವು ಸಹ ಇರುವದರಿಂದ ವೈದಿಕಭಿನ್ನ ಸ್ತ್ರೀಶೂದ್ರಾದಿ ಪರತ್ವವನ್ನು ಕಲ್ಪಿಸುವದು ಅಸಂಗತವೆಂಬುವ ಅಂಶವನ್ನು ಪೂರ್ವದಲ್ಲಿಯೇ ತಿಳಿಸಿರುವೆವು.

[ "ಮತ್ತು ಅದೀಕ್ಷಿತೈರ್ನರೈರೇವಂ ಸ್ಪೃಶ್ಯತೇ ಯದಿದೇವರಾಟ್ । ಎಂಬುವದನ್ನು ಮೊದಲುಮಾಡಿಕೊಂಡು ಬರದಿರುವ ವಚನಗಳು ಫಲಾನೆ ಗ್ರಂಥದಲ್ಲಿರುವದೆಂದು ಗೊತ್ತಿಲ್ಲದೇಲೂ ಆಭಾಸವಾಗಿಯೂ ಇರುವದ್ದರಿಂದಲೂ ಕಲ್ಪಿತವೆಂದುನ್ನೂ ಹೇಳಬಹುದು" ] ಎಂದು ಬರದಿರುತ್ತಾರೆ.

ಇವರಿಗೆ ಫಲಾನೆ ಗ್ರಂಥದಲ್ಲಿ ಇರುವದೆಂದು ಗೊತ್ತಿಲ್ಲದೆಹೋದವಾ

ತ್ರಕ್ಕೆ ಆ ವಚನಗಳು ಕಲ್ಪಿತಗಳಾಗುವವೆ! ಹಾಗಾದರೆ ಶ್ರುತಿಸ್ಮೃತ್ಯಾದಿಗಳಲ್ಲಿರುವ ವಾಕ್ಯಗಳು ಅದನ್ನು ಅಧ್ಯಯನ ಮಾಡದೆ ಇರುವವರಿಗೆ ಗೊತ್ತಾಗದೆ ಇರುವ ಕಾರಣ ಕಲ್ಪಿತಗಳಾಗಿ ಅಪ್ರಮಾಣವಾಗಬೇಕಾಗಿ ಬರುವದು. ವಸ್ತುತಃ ನಾವು ಉಪಕ್ರಮದಲ್ಲೇ "ಭಗವತ್ಪ್ರಸಿದ್ಧೀಯ ಪ್ರಾಯಶ್ಚಿತ್ತ ಸಂಗ್ರಹ" ಎಂದು ಉಪಕ್ರಮಿಸಿ ವಚನಗಳನ್ನು ಬರೆದು ಇರುತ್ತೇವೆ. ಆದ್ದರಿಂದ ಈ ವಚನಗಳೆಲ್ಲವು ಆ ಗ್ರಂಥದಲ್ಲಿಯೇ ಇರುವದೆಂದು ಕಣ್ಣು, ಕಿವಿ ಸಹಾ ಉಳ್ಳವರಿಗೆ ಗೊತ್ತಾಗುವದಕ್ಕೆ ಯಾವ ಅಡ್ಡಿಯೂ ಇಲ್ಲ. ಹೀಗೆ ಗ್ರಂಥದ ಹೆಸರನ್ನು ಬರೆದಿದ್ದರೂ ಬರೆಯಲಿಲ್ಲವೆಂದು ಅಪಲಾಪ ಮಾಡುವ ವದಕ್ಕೆ ಉಪಕ್ರಮಿಸಿ ಇರುವವರಿಗೆ ಯೇನು ಉತ್ತರ ಬರೆದರೆ ತಾನೆ ಫಲವೇನು. ಆದರೂ ನಿಷ್ಪಕ್ಷಪಾತಿಗಳಾದ ಮಧ್ಯಸ್ಥರು ಇವುಗಳನ್ನೆಲ್ಲಾ ನೋಡದೆ ಇರಲಾರರು. ಮತ್ತು ಮೇಲ್ಕಂಡ ವಚನಗಳಲ್ಲಿ ಯಾವ ಆಭಾಸ ವಿಲ್ಲದಿದ್ದರೂ ಇವರಿಗೆ ಆಭಾಸವೆಂದು ತೋರಿದ ಮಾತ್ರದಿಂದ ಅದು ಆಭಾಸವಾಗಿ ಕಲ್ಪಿತವಾಗುವುದೆ ?

ನಿಜದೋಷಾವೃತಮನಸಾಮತಿಸುಂದರಮೇವಭಾತಿ ವಿಪರೀತಂ ।
ಪಶ್ಯತಿಪಿತ್ತೋಪಹತಃ ಶಶಿಶುಭ್ರಂ ಶಂಖಮಪಿ ಗೌರಂ ।

ಎಂಬಂತೆ ಆಭಾಸವಾಗಿ ತೋರುವದು ಇವರದೋಷವೇ

ಆದೌಮಹೇತ್ಯಾದಿ ವಾಮನ ಸಂಹಿತಾವಚನಗಳಲ್ಲಿ, ಉಪಕ್ರಮದಲ್ಲಿ, ಕಾಲವಿಶೇಷದಲ್ಲಿ ಕೆಲವು ಋಷಿಗಳಿಗೆ ಆಗಮೋಪದೇಶ ಪೂರ್ವಕ ದೀಕ್ಷಾವಿಧಿ ಭಗವನ್ತನಿಂದಲೇ ನಡಿಸಲ್ಪಟ್ಟಕಾರಣ ಭಗವದ್ವಂಶಜರಾದ ಅವರು ಆಲಯ ಪೂಜೆಮಾಡುವದಕ್ಕೆ ಅತಿಶ್ರೇಷ್ಠರೆಂದು ಹೇಳಲ್ಪಟ್ಟಿರುತ್ತೆ-ಕೊನೆಯಲ್ಲಿ ದೀಕ್ಷಾಸಂಸ್ಕಾರ ರಹಿತರಾದವರು ಮಾಡುವಪೂಜೆಯು ನಿಷ್ಫಲವಾಗುವದೆಂದು ಹೇಳಲ್ಪಟ್ಟಿರುತ್ತೆ. ಹೀಗಿರುವಲ್ಲಿ—[ "ವಾಮನ ಸಂಹಿತಾಯಾಂ

ಆದೌಮಯಾಭಗವತಾ ಶಾಸ್ತ್ರಮೇತದುದೀರಿತಂ ।
ತಸ್ಮಾದ್ಭಾಗವತಂಶಾಸ್ತ್ರ ಮಿತಿಲೋಕೇ ಮಹೀಯತೆ ॥
ಏಕ್ಷಿತೈಸ್ಸತ್ವಸ್ತ್ವೈರೇವ ಭಗವದ್ವಂಶಜೈಸ್ತಥಾ ।
ಜ್ಞಾನಯೋಗ ಪನಿಷ್ಠೈಶ್ಚ ವೇದವಿದ್ಬಿರ್ಜಿತೋತ್ತಮೈಃ ।
ಶುದ್ಧಂಭಾಗವತಂಶಾಸ್ತ್ರ ಮನುಷ್ಠೇಯಂಮದಾಜ್ಞಯಾ ॥
ಅರ್ಚನಂಭಗವದ್ವಂಶ್ಯೈಃ ಕಾರ್ಯಂನಾನ್ಯೈರ್ನಸಂಶಯಃ ।
ಎಂದುವಕ್ರಮಿಸಿ-ತೇಷಾಂಮಧ್ಯೇಪಂಚಗೋತ್ರಾಃ ಪಂಚರಾತ್ರಾಧಿಕಾರಿಣಃ।
ಔಪಗಾಯನಶಾಂಡಿಲ್ಯ ಭರದ್ವಾಜಾಶ್ಚಕೌಶಿಕಃ ।
ಮೌಂಜಾಯನಶ್ಚಪಂಚೈತೆ ಭಗವದ್ವಂಶಜಾಸ್ಮೃತಾಃ ॥ ]
ಎಂದುನೂ (ಪರಾರ್ಥೆಸಿಸ್ಸಲಾಚ್ಞೇಯಾ ಸದ್ವದೋಷಯುತಾಭವೇತ್)
ಎಂಬ ಪರ್ಯಂತವಾಗಿ ಕೆಲವು ವಚನಗಳು ಬರಿಯಲ್ಪಟ್ಟವೆ " ]

ಎಂದು ಬರದು ಆವಚನ ವಿಷಯವಾಗಿ ಮಾಡಿರುವ ಆಕ್ಷೇಪಣೆಗಳು ಅಸಂಬದ್ಧಗಳಾಗಿಯೂ ನಾಸ್ತಿಕಾಕ್ಷೇಪ ತುಲ್ಯವಾಗಿಯೂ, ಇರುವವು. ಆ ಆಕ್ಷೇಪಗಳು ಯಾವಂದರೆ—

[ " (೧) ಈವಚನಗಳು ಜೀವನಾಪೇಕ್ಷಿಗಳಾದ ಅರ್ಚಕ ಜನಗಳಿಂದಲೇ ಕಲ್ಪಿತಗಳಾಗಿ ಸೇರಿಸಲ್ಪಟ್ಟವೆಯೆಂದು ಸ್ಪಷ್ಟವಾಗಿ ಹೇಳಬಹುದು. ಅದುಹ್ಯಾಗೆಂದರೆ— (೨) ಪ್ರಾಯಶಃ ಶ್ರೀವೈಷ್ಣವರೆಲ್ಲರು ಪಾಂಚರಾತ್ರಾದ್ಯಾಗಮೋಕ್ತವಾದ ಕೆಲವು ದೀಕ್ಷಾಬದ್ಧರೆಂದು ಹೇಳಬಹುದಾಗಿದೆ(೩)ಅವರು ಉದಾಹರಿಸಿರುವ ವಚನಗಳಿಂದಲೇ ಔಪಗಾಯನೇತ್ಯಾದಿ ೫ ಗೋತ್ರದವರೇ ಪಂಚರಾತ್ರಾಧಿಕಾರಿಗಳಾದಮೇಲೆ ತದ್ಭಿನ್ನ ಗೊತ್ರರಾದ ಶ್ರೀವೈಷ್ಣವರಿಗೆ ಪಂಚರಾತ್ರಾಧಿಕಾರವಿಲ್ಲದ ಪಕ್ಷದಲ್ಲಿ ಇವರುಹ್ಯಾಗೆ ಪಂಚರಾತ್ರಾಗಮೋಕ್ತ ಕೆಲವು ದೀಕ್ಷೆಗಳನ್ನವಲಂಬಿಸಿದರೊ ಇದೇವಿಚಾರಣೀಯವಾಗಿದೆ (೪) ಮತ್ತು ಮೇಲೆಹೇಳಿರುವ ಐದು ಗೋತ್ರಗಳುಳ್ಳ ದೇವಾಲಯಗಳಲ್ಲಿ

ರುವ ಅರ್ಚಕರೇ ಭಗವದ್ವಂಶಜರೆಂದುನ್ನೂ ಹೇಳಿರುವದನ್ನ ಈ ವೈಷ್ಣವಮಹಾಜನರೇಒಪ್ಪಿದ ಪಕ್ಷದಲ್ಲಿ ಈ ಅರ್ಚಕರು ದೇವರಸನ್ನಿಧಿಯಲ್ಲಿ ಕೊಡತಕ್ಕ ತೀರ್ಥವನ್ನುಮಾತ್ರ ತೆಗದುಕೊಳ್ಳುವದೇಹೊರತು, ದೇವಸ್ಥಾನವಿಂದಾ ಹೊರಕ್ಕೆಬಂದರೆ ಈ ಅರ್ಚಕರಕೈಲಿ ನೀರನ್ನುಸಹಾ ಈ ಶ್ರೀವೈಷ್ಣವರು ಕುಡಿಯುವದಿಲ್ಲವು ತಮ್ಮಗಳ ಮನೆಗೆ ಈ ಅರ್ಚಕರನ್ನ ಭೋಜನಕ್ಕೆ ಕರೆಯುವದುಯಿಲ್ಲ. ಈ ಅರ್ಚಕರಮನೆಗೆ ಒಬ್ಬರೂ ಭೋಜನಾದಿಗಳಿಗೆ ಹೋಗುವದೂಇಲ್ಲ ಅದು ಯಾತಕ್ಕೆ ? ಸಾಕ್ಷಾದ್ಭಗವದ್ವಂಶ ಜನ್ಯರಾದ ಮೇಲೆ ಎಲ್ಲರಿಗಿಂತಲೂ ಶ್ರೇಷ್ಠರಷ್ಟೆ ಮತ್ತು ತಮಗಿಂತಲೂ ಪಂಚರಾತ್ರಾಗಮಗಳಲ್ಲಿ ವಿಶೇಷವಾಗಿ ಅಧಿಕಾರವನ್ನ ಹೊಂದಿರುವರಷ್ಟೆ ! ಇಂಥಾವರಿಂದಾ ಯಾತಕ್ಕ ಅನ್ನೋದಕಾದಿಗಳನ್ನ ತೆಗದುಕೊಳ್ಳಬಾರದು ? ಇವರನ್ನು ಯಾತಕ್ಕೆ ಪಂಗ್ತಿಯಲ್ಲಿ ಕೂಡಿಸಿಕೊಂಡು ಭೋಜನಾದಿಗಳನ್ನು ಮಾಡಬಾರದು ? ಇದರಿಂದಲೇ ಇವರಿಗೆ ನಿಕೃಷ್ಟತ್ವ ಪ್ರಕಾಶವಾಗುತ್ತೆ (೫) ಉತ್ಪತ್ತಿನಾಶರಹಿತನಾದ ಭಗವಂತನಿಗೆ ವಂಶವೆಂದರೆಏನು ? ಈಭಗವಂತನಿಗೆ ತಂದೆಯಾರು, ತಾಯಿಯಾರು, ಆದ್ದರಿಂದ ಭಗವದ್ವಂಶಜರೆಂಬ ಮಾತೇ ಸುಳ್ಳಾಯಿತು (೬) ಒಂದುವೇಳೆ ಈಭಗವಂತ ಉತ್ಪತ್ತಿ ಶೂನ್ಯನಾದರೂ ಇವನಿಂದ ಹುಟ್ಟಿದವರು ಭಗವದ್ವಂಶಜರೆಂದು ಹೇಳೋಣವೆಂದರೆ ಅಂಥಾ ಭಗವದ್ವಂಶಜರು ಯಾರುತಾನೇಇಲ್ಲ. ಆಚಂಡಾಲರೂ ಭಗವಂತನಿಂದಲೇ ಸೃಷ್ಟಿಮಾಡಲ್ಪಟ್ಟಿರುವದ್ದರಿಂದ ಭಗವದ್ವಂಶಜರೆ ಆಗಬೇಕಾಗುತ್ತೆ (೭) ಮತ್ತು ಇವರಿಗೆ ಔಪಗಾಯನಶಾಂಡಿಲ್ಯ ಕೌಶಿಕಾದಿ ಗೋತ್ರಗಳು ಹ್ಯಾಗೆಬಂತು ? (೮) ಈ ೫ ಗೋತ್ರದವರೂ ಒಂದೇ ವಂಶದಲ್ಲಿ ಹುಟ್ಟಿದವರಾದಮೇಲೆ ಇವರುಗಳಿಗೆ ಪರಸ್ಪರ ವಿವಾಹಾದಿಗಳು ಹ್ಯಾಗೆ ನಡೆಯಬಹುದು ? (೯) ಮತ್ತು ಕೌಶಿಕರು ಮೊದಲು ಕ್ಷತ್ರಿಯರಾಗಿದ್ದು ಅನಂತರ ಬ್ರಾಹ್ಮಣ್ಯವನ್ನು ಹೊಂದಿದವರೆಂದು ಅನೇಕಪ್ರಮಾಣಗಳು ಗೊತ್ತಾಗುತ್ತಲಿರುವಲ್ಲಿ ಇದರ ಮಾ ಭಗವನ್ಮುಖಜ

ಸ್ವರೂಹ್ಯಾಗೆ ? (೧೦) ಮತ್ತು ಈ ವಿಶ್ವಾಮಿತ್ರರು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ಬ್ರಾಹ್ಮಣ್ಯವನ್ನು ಕೇಳಿಕೊಂಡಾಗ "ಓಂಕಾರಶ್ಚ ವಷಟ್ಕಾರೋ ವೇದಾಶ್ಚ ವರಯಂತುಮಾಂ'' ಎಂದು ಕೇಳಿಕೊಂಡಿರುವರೇ ಹೊರ್ತು ಪಂಚರಾತ್ರಾಗಮವನ್ನು ಕೇಳಿಕೊಳ್ಳಲಿಲ್ಲವು. (೧೧) ಇಂಥಾ ಅನುಪಪತ್ತಿಗಳು ಬಹಳವಾಗಿ ಅಪರಿಹಾರ್ಯವಾಗಿ ಇರುವದರಿಂದ ಈವಚನಗಳು ದೇವಲಕತ್ವದಿಂದ ಸ್ವತಃ ದೂಷ್ಯರಾದ ಕೆಲವರು ಅರ್ಚಕರು ತಮಗೆ ಶ್ರೇಷ್ಠತ್ವವನ್ನು ಕಲ್ಪಿಸಿಕೊಂಡು ತಮಗೆಇರತಕ್ಕ ಪೂಜಕತ್ವವು ತಮಗೇವ ಶಾಶ್ವತವಾಗಿ ಜೀವನೋಪಾಯವಾಗಿ ಇರಲಿಎಂದು ಯೋಚಿಸಿ ಈವಚನಗಳನ್ನು ಕಲ್ಪಿಸಿ ಆಗಮಾದಿಗಳಲ್ಲಿ ಶೇರಿಸಿರುವರೆಂದು ಧಾರಾಳವಾಗಿ ಹೇಳಬಹುದು. (೧೨) ಅತಏವ ಧರ್ಮಶಾಸ್ತ್ರಾದಿಗಳಲ್ಲಿ ಈದೇವಲಕರಿಗೆ ವಿಶೇಷ ನಿಷಿದ್ಧತ್ವವನ್ನ ಹೇಳಿರುತ್ತಾರೆ ಹೇಮಾದ್ರಿ ಪ್ರಾಯಶ್ಚಿತ್ತಕಾಂಡದಲ್ಲಿ, ದೇವಲಃ-ಯೋನ್ನಂ ದೇವಲಕಸ್ಯಾಪಿ ಭುಂಕ್ತೇನ್ನಂಗಣಕಸ್ಯಚ| ಮದ್ಯಪಾತ್ ವಿಜಾನೀಯಾತ್ ಸರ್ವಕರ್ಮಬಹಿಷ್ಕೃತಃ| ವಿಷ್ಣುರಹಸ್ಯೇ-ದೇವಲಾನ್ನಂ ತುಯೋಭುಂಕ್ತೇ ತಥಾಗಣಕಭೋಜನಂ| ಉಭೌತೌ ಪಾಪಕರ್ಮಾಣೌ ನಸಂಭಾಷ್ಯೌಕದಾಚನ| ಗರುಡಪುರಾಣೆ-ದೇವಾರ್ಚಕಸ್ಯ ಯೋಭುಂಕ್ತೇತಥಾಗಣಕವೇಶ್ಮನಿ| ಉಭೌತೌ ಪಾಪಿನೌಪ್ರೋಕ್ತೌ ಪ್ರಾಯಶ್ಚಿತ್ತಂ ಮಥಾರ್ಹತಃ| ಏಕರಾತ್ರಂ ಪಂಚಗವ್ಯಂ ತ್ರಿರಾತ್ರಂ ಯಾವಕಂಸ್ಮೃತಂ| ದೇವಲಕನಂದರೆ-ಯೋಗೃಹೀತ್ವಾಧನಂ ವಿಪ್ರಃ ಕುರುತೆದೇವ ಪೂಜನಂ| ಸವೈದೇವಲಕೋನಾಮ ಸರ್ವಕರ್ಮಬಹಿಷ್ಕೃತಃ | ಈರೀತ್ಯಾ ದೇವಲಕನಿಗೆ ವಿಶೇಷ ನಿಷಿದ್ಧತ್ವವನ್ನು ಹೇಳಿರೋಣದರಿಂದ ಇವರೇ ತಮಗೆ ಶ್ರೇಷ್ಠತ್ವವನ್ನು ಕಲ್ಪಿಸಿಕೊಳ್ಳುವದಕ್ಕೋಸ್ಕರ ಇಂಥಾವಚನಗಳನ್ನ ಆಗಮಾದಿಗಳಲ್ಲಿ ಸೇರಿಸಿರುವರೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. (೧೩) ಮತ್ತು ಈವಚನಗಳು ಸ್ತೋತ್ರರೂಪವಾಗಿದ್ದರು, ಇವುಗಳಿಂದ ಯಾವದುದ್ದೇಶ್ಯವು ಸಿದ್ಧಿಸುವದಿಲ್ಲವು.

ಆದ್ದರಿಂದ ಮೊದಲನೇ ಪ್ರದ್ದೇಶ್ಯವು ಸರ್ವಥಾ ಸಿದ್ಧಿಸಲಿಲ್ಲವು " ]

ಎಂದು ಆಕ್ಷೇಪಣೆಗಳನ್ನು ಬರದಿರುವರು ಇಲ್ಲಿ ವಿಶೇಷವಾಗಿ ಬರೆದರೇಗ್ರಂಥಾಧಿಕ್ಯವಾಗುವಕಾರಣ ಆಕ್ಷೇಪವಾಕ್ಯ ಸಂಖ್ಯಾನುಸಾರ ಸಂಗ್ರಹವಾಗಿ ಸಮಾಧಾನವನ್ನು ಬರೆಯುವೆವು. (೧) ಅರ್ಚಕರು ಜೀವನಾಪೇಕ್ಷಿಗಳಾದರೆ ಅವರನ್ನು ನಿಷ್ಕಾರಣವಾಗಿ ನಿರಾಧಾರವಾಗಿ ಆಕ್ಷೇಪಿಸುವ ಇವರು ಮರಣಾಪೇಕ್ಷಿಗಳೊ ? ಹಾಗೆಯೇ ಇರಬಹುದು. ಲೋಕದಲ್ಲಿ ಜೀವನಾಪೇಕ್ಷಿಗಳು ಭಗವಚ್ಛಾಸ್ತ್ರವನ್ನು ಭಗವದ್ಭಕ್ತರನ್ನುಸಹ ನಿಂದಿಸಲಾರರಷ್ಟೆ. (೨) ನೇವಾಕ್ಯವು ಯುಕ್ತವೇಸರಿ ಆದರೆ ಶ್ರೀಮನ್ಮಧ್ವಸಂಪ್ರದಾಯಾದ್ಯನುಸಾರಿಗಳನ್ನುಸಹಾ ವಾಕ್ಯದಲ್ಲಿ ಸಂಗ್ರಹಿಸುವದಕ್ಕಾಗಿ " ಶ್ರೀವೈಷ್ಣವರೆಲ್ಲರೂ " ಎನ್ನುವದಕ್ಕೆ ಬದಲಾಗಿ ವೈಷ್ಣವರೆಲ್ಲರೂ ಎಂದುಬರೆದರೆ ಅತ್ಯಂತಸಂಗತವಾಗಿರುವದು (೩) ಔಪಗಾಯನಾದಿಗಳು ಸಾಕ್ಷಾದ್ಭಗವಂತನಿಂದ ದೀಕ್ಷಿತರಾದ್ದರಿಂದ ತದ್ವಂಶಜರು ದೇವಾಲಯಸ್ಥವಾದ ಪರಾರ್ಥಬಿಂಬದ ಪೂಜೆಗೆ ಅಧಿಕಾರಿಗಳೆಂದುನ್ನೂ ದೀಕ್ಷಾಸಂಸ್ಕಾರವಿಲ್ಲದ ಇತರರು ಪರಾರ್ಥಪೂಜೆಗೆ ಅಧಿಕಾರಿಗಳಲ್ಲವೆಂದುನ್ನು

ಚಕ್ರಾಬ್ಜಮಂಡಲೇ ಶುದ್ಧೇ ಸರ್ವಾಭೀಷ್ಟಪ್ರದೇಶುಭೇ ।
ಯಸ್ಮಾದ್ಭಗವತಾಸಾಕ್ಷಾನ್ಮಯಾ ದೀಕ್ಷಾವಿಧಿಃಕೃತಃ ।
ನಾಮತೋ ದೀಕ್ಷಿತಾಸ್ತಸ್ಮಾ ದ್ಭಗವದ್ವಂಶಜಾಸ್ಸ್ಮೃತಾಃ ।
ಪಂಚರಾತ್ರೋದಿತಂ ಮನ್ತ್ರಂ ಮಯಾಭಗವತಾಪುನಃ ।
ಉಪದಿಷ್ಟಂಚ ಪಂಚಾನಾಮೃಷೀಣಾ ಮಧುನಾಯತಃ ।
ತಸ್ಮಾತ್ತು ಭಗವದ್ವಂಶ್ಯಾ ಸ್ಸರ್ವಕರ್ಮಸುಪೂಜಿತಾಃ ।
ದೀಕ್ಷಾಯುಕ್ತೈಸ್ತು ಸಂಸ್ಕಾರೈರ್ಮದುಕ್ತೈ ರೇವಪಂಚಭಿಃ ।
ತಸ್ಮಾತ್ತು ಸಂಸ್ಕೃತಾಯೂಯಂ ಪಂಚಗೋತ್ರಸಮುದ್ಭವಾಃ ।
ಔಪಗಾಯನ ಶಾಂಡಿಲ್ಯ ಭರದ್ವಾಜಾಶ್ಚ ಕೌಶಿಕಃ ।

ಮಾಂಜೌಯನಸ್ತು ಪಂಚೈತೆ ಭಗವದ್ವಂಶ ಜಾಸನ್ಮೃತಾಃ ।
ಭಗವದ್ವಂಶಜೈರೆವ ಪಂಚರಾತ್ರ ಪರಾಯಣೈಃ ।
ಯಾಪ್ರೂಜಾಕ್ರಿಯತೆಮಹ್ಯಂ ಸರ್ವಕಾಮಫಲಪ್ರದಾ ।
ದೀಕ್ಷಿತೈರ್ನಿರ್ಗುಣೈರ್ವಾಪಿ ಭಗವದ್ವಂಶಜೈಃ ಕೃತಂ ।
ನಿತ್ಯೋತ್ಸವಾದಿಕಂಕರ್ಮ ಭುಕ್ತಿಮುಕ್ತಿಪ್ರದಂಭವೇತ್
ಅನ್ಯೈಃಕೃತಾತು ಯಾಪ್ರೂಜಾದೀಕ್ಷಾ ಸಂಸ್ಕಾರವರ್ಜಿತೈಃ ।
ಪರಾರ್ಥೇ ನಿಷ್ಫಲಾಜ್ಞೇಯಾ ಸರ್ವದೋಷಯುತಾ ಭವೇತ್ ।

ಇತ್ಯಾದಿ ವಾಮನ ಸಂಹಿತಾ ವಚನಗಳಲ್ಲಿದ್ದರೂ ವೈದಿಕರಿಗೆ ನಿತ್ಯಕರ್ಮರೂಪ ವಾದ ಸ್ವಸ್ವಗೃಹಸ್ಥಿತಬಿಂಬ ಪ್ರೂಜನವಲ್ಲಿ ಅಧಿಕಾರಸಿದ್ಧಿಗೋಸ್ಕರ ಪಂಚ ಸಂಸ್ಕಾರದೀಕ್ಷೆಯನ್ನು ವೈಷ್ಣವರೆಲ್ಲರೂ ಸ್ವೀಕರಿಸುವದಕ್ಕೆ ಯಾವಬಾಧೆ ಯೂಇಲ್ಲ.

ತಾಪಃಪುಣ್ಡ್ರಸ್ತಥಾನಾಮಮನ್ತ್ರೋಯಾಗಶ್ಚಪಂಚಮಃ ।
ಪಂಚಸಂಸ್ಕಾರ ದೀಕ್ಷೆಯಂ ದೇವದೇವ ಪ್ರಿಯಂಕರೀ ।
ತಸ್ಮಾತ್ತ್ವಮಪಿರಾಜರ್ಷೆವಿಷ್ಣುಸಾಯುಜ್ಯ ಮಿಚ್ಛಸಿ ।
ದೀಕ್ಷಾಮಾರ್ಗ ವಿಧಾನೇನ ಧಾರಯಿತ್ವಾ ಸುದರ್ಶನಂ ।
ನಾರಾಯಣಪದದ್ವಂದ್ವಂತದೇಕಂ ಶರಣಂವ್ರಜ ।

ಇತ್ಯಾದಿಗಳಲ್ಲಿ ಪಂಚಸಂಸ್ಕಾರದೀಕ್ಷೆಯು ಸರ್ವಾಧಿಕಾರಿಕವಾಗಿಯೇ ಹೇಳಲ್ಪ ಟ್ಟಿರುತ್ತೆ. ಆದ್ದರಿಂದ (೩) ನೇ ವಾಕ್ಯವು ಅಸಂಗತವು.

(೪) ಪಂಚಗೌಡರಿಗೂ ಪಂಚದ್ರಾವಿಡರಿಗೂ ಪರಸ್ಪರ ಭೋಜನ ಪ್ರತಿಭೋಜನಗಳಿಲ್ಲದ ಇರುವದ್ದರಿಂದ ಭೋಜನ ಪ್ರತಿಭೋಜನಗಳು ಯಿಲ್ಲದೆ ಇರುವದು ಉತ್ಕರ್ಷಾಪಕರ್ಷವಿಷಯದಲ್ಲಿ, ಅಪ್ರಯೋಜಕವು, ಸೋಮ ಯಾಗಾದಿಗಳನ್ನು ಮಾಡುವರು ಶ್ರೇಷ್ಠರೆಂಬು ಇವರು ಒಪ್ಪಿಕೊಂಡಿರುವವ ರಷ್ಟೆ ಸೋಮಯಾಗದಲ್ಲಿ ದೀಕ್ಷಿತರಾಗಿರುವ ಸಮಯದಲ್ಲಿ ಅವರ ಅನ್ನವನ್ನು

ಇತರರುಯಾತಕ್ಕೂ ಭುಜಿಸುವದಿಲ್ಲ ಅವರವರ ಬಂಧುಗಳೊಡನೆ ಮಾತ್ರ ಆಸರವರು ಭೋಜನ ಪ್ರತಿಭೋಜನಾದಿಗಳನ್ನು ಸರ್ವರೂ ನಡಿಸುವರು. ಆದ್ದರಿಂದ ಇತರರೊಡನೆ ಭೋಜನಾದಿಗಳಿಲ್ಲದೆ ಇರುವದು ನಿಕೃಷ್ಟತಾ ಪಾದಕವಲ್ಲವು.

(೫) ತನಿಗೆ ಸೃಷ್ಟಿಕರ್ತನಾದ ಒಬ್ಬನು ಬೇರೆಇಲ್ಲದಿದ್ದರೂ ಅಂಥಾಭಗ ವಂತನಿಂದ ಜಗತ್ತು ಸೃಷ್ಟಿಸಲ್ಪಟ್ಟಿರುವಹಾಗೆ ತಂದೆತಾಯಿ ಇಲ್ಲದ ಭಗವ ನ್ತನಿಂದ ಒಂದು ವಂಶವು ಪ್ರವರ್ತಿಸಲ್ಪಟ್ಟಿರುವದು ಆಶ್ಚರ್ಯಕರವಲ್ಲ, ಆದ್ದ ರಿಂದ ಭಗವಂತನಿಗೆ ತಂದೆತಾಯಿಗಳಿರಬೇಕೆಂಬ ಊಹೆಗೆ ಅವಕಾಶವುಇಲ್ಲಾ

(೬) "ಸಚಾಚಾರ್ಯವಂಶೋಜ್ಞೇಯಃ–" ಇತ್ಯಾದಿಗಳಂತೆ ಔಪಗಾ ಯನಾದಿಗಳು ಭಗವಂತನಿಂದ ಕಾಲವಿಶೇಷದಲ್ಲಿ, ಸಾಕ್ಷಾತ್ತಾಗಿಯೇ ದೀಕ್ಷಿಸ ಲ್ಪಟ್ಟವರಾದ್ದರಿಂದ ಭಗವದ್ವಂಶಜರೆಂದು ಉಪಾಹೃತವಚನಗಳಲ್ಲಿಯೇ ಸ್ಫುಟವಾಗಿರುವದು ಆದ್ದರಿಂದ ಆರೀತಿಯಾಗಿ ಔಪಗಾಯನಾದಿಗಳೇ ಭಗವದ್ವ ಂಶವರೆನ್ನುವದಕ್ಕೆ ಯಾವದೋಷವೂ ಇರುವದಿಲ್ಲಾ.

(೭) ಜಮದಗ್ನ್ಯಾದಿಗೋತ್ರಗಳು ಹ್ಯಾಗೆಬಂತೋ ಅದೇರೀತಿಯಿಂದಲೇ ಔಪಗಾಯನಾದಿಗೋತ್ರಗಳು ಬಂದಿರುವದೆಂದು ಇವರು ಆಲೋಚಿಸಬೇಕು.

(೮) ಅಹಂಪ್ರಜಾಸ್ಸಿಸೃಕ್ಷುಸ್ತು ತಪಸ್ತಪ್ತ್ವಾಸುದುಸ್ತರಂ ।
ಪತೀನ್ಪ್ರಜಾನಾಮ ಸೃಜಂಮಹರ್ಷೀನುಗ್ರತೇಜಸಃ ।
ಮರೀಚಿ ಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂಕ್ರತುಂ ।
ಪ್ರಚೇತಸಂ ವಸಿಷ್ಠಂಚ ಭೃಗುಂನಾರದ ಮೇವಚ ।

ಎಂದು ಮನುಸ್ಮೃತ್ಯಾದಿರೀತ್ಯಾ ಅತ್ರಿವಸಿಷ್ಠಾದಿಗಳು ಒಬ್ಬರಿಂದಲೇ ಹುಟ್ಟಿ ಇರುವಲ್ಲಿ ಅವರಸಂತಾನದವರಿಗೆ ಪರಸ್ಪರವಿವಾಹವಾಗುವದಕ್ಕೆ ಯೇನುಸ ಮಾಧಾನ ಯೋಚಿಸಿರುವರೊ ಅದೇ ಇವರ ಆಕ್ಷೇಪಕ್ಕೂ ಸಮಾಧಾನವಾ ಗಿರುವದು. (೯) ಕೌಶಿಕರಿಗೆ ಬ್ರಾಹ್ಮಣ್ಯವೇ ಅನಂತರ ಬಂದಿರುವಲ್ಲಿ ಅವ

ರಿಗೆನಾವು ಹೇಳಿದ, ಭಗವದ್ವಂಶಜತ್ವವು ಬರುವದಕ್ಕೆ ಯಾವಬಾಧೆಯೂ ಇಲ್ಲ. (೧೦) ವಿಶ್ವಾಮಿತ್ರರು “ ಓಂಕಾರಶ್ಚ ವಷಟ್ಕಾರೊ ವೇದಾಶ್ಚನರ ಯಂತುನಾಂ-ಎಂದು ಕೇಳಿಕೊಂಡ ಸಮಯದಲ್ಲಿ, ಸ್ಮೃತೀತಿಹಾಸಪುರಾ ಣಗಳನ್ನು ಕೇಳಿಕೊಳ್ಳದೇ ಇರುವಂತೆ ಪಾಂಚರಾತ್ರವನ್ನು ಕೇಳಿಕೊಳ್ಳದೆ ಇದ್ದಾಗ್ಯೂ ಬಾಧಕವಿಲ್ಲ.

(೧೧) ಮೇಲೆಹೇಳಿದ ರೀತಿಯಲ್ಲಿ ಉದಾಹೃತವಚನಗಳಲ್ಲಿ ಇವರು ಆಕ್ಷೇಪಿಸಿದ ಯಾವ ಅನುಪಪತ್ತಿಗೂ ಅವಕಾಶವಿಲ್ಲದ ಕಾರಣ ಆ ವಚನಗ ಳನ್ನು ಕಲ್ಪಿಸಿ ಅರ್ಚಕರು ಆಗಮಗಳಲ್ಲಿ ಶೇರಿಸಿಧಾರೆಂದು ಹೇಳುವದು ನಾಸ್ತಿಕರು ಹೇಳುವ ಮಾತಿನಂತೆ ಇರುವದು

(೧೨) ಆಗಮೋಕ್ತ ದೀಕ್ಷಾಯುಕ್ತರಾಗಿ ಅರ್ಚನೆಯನ್ನು ಮಾಡುವ ವರಿಗೆ ದೇವಲಕತ್ವವು ಇಲ್ಲವೆಂದು ಅನೇಕವಚನಗಳು ಸ್ಮೃತಿಸಂಹಿತಾದಿಗಳಲ್ಲಿ ರುವದರಿಂದಲೂ! ಸ್ಮೃತಿರತ್ನಾಕರವೈಕುಂಠದೀಕ್ಷಿತೀಯಗ್ರಾಮಪ್ರಾಮಾಣ್ಯಾದಿಗ ಳಲ್ಲಿ ಆವಚನಗಳನ್ನು ಉದಾಹರಿಸಿ ವ್ಯವಸ್ಥೆಯನ್ನು ಮಾಡಿರುವದ್ದರಿಂದಲೂ, ಹೇಮಾದ್ರ್ಯುದಾಹೃತವಾದ ಸಾಮಾನ್ಯವಾದ ವಚನಗಳಿಗೆ ಅದೀಕ್ಷಿತ ದೇವಪೂ ಜಕ ಪರತ್ವವನ್ನೇ ಹೇಳಬೇಕಾದಕಾರಣ (೧೨) ನೇ ವಾಕ್ಯದಲ್ಲಿ ಬರಿದಿರು ರುವದು ಸರ್ವಥಾ ಅಸಂಗತವು. ತಥಾಚ-ವೈಕುಂಠದೀಕ್ಷಿತೀಯೆ.

ಸಂಕರ್ಷಣ ಸಂಹಿತಾಯಾಂ..................ನಪಾಂಚರಾತ್ರ ವಿಧಿ ಮಾನ್ನವೈಖಾನಸಸೂತ್ರವಾ ‖ ನಶೈವದೀಕ್ಷಿತೋವಿಪ್ರೊ ವಿತ್ತಾರ್ಥೀವ ತ್ಸರತ್ರಯಂ | ಗ್ರಾಮದೇವಾರ್ಚನ ಪರಸ್ಸವೈ ದೇವಲಕಸ್ಮೃತಃ ‖ ವಿಷ್ಣೊ ತತ್ರೈವ-ಮದ್ಭಕ್ತೊ ವೈಷ್ಣವೊವಿಪ್ರಃ ಪಂಚಸಂಸ್ಕಾರದೀಕ್ಷಿತಃ| ಮಚ್ಛೇ ಷತ್ವಪರಿಜ್ಞಾನೀ ಮಮಪೂಜಾ ಪರಾಯಣಃ | ಮಂತ್ರರತ್ನೋಕ್ತಮಾರ್ಗೇ ಣಮಹಾವಿಶ್ವಾಸ ಪೂರ್ವಕಂ | ಆತ್ಮಾರ್ಥಂವಾ ಪರಾರ್ಥಂವಾ ಮಮಪೂಜಾ ಪರಸ್ಸದಾ | ನಚದೇವಲಕೊಜ್ಞೇಯ ಸ್ಸರ್ವಪೂಜಾಂ ಸಮಾಚರೇತ್ |

ಪರಾಶರಸಂಹಿತಾಯಾಂ—ದೀಕ್ಷಿತಃ ಪಂಚಸಂಸ್ಕಾರೈರರ್ಥಪಂಚಕತತ್ತ್ವವಿತ್ । ಪಂಚಕಾಲಪರೋನಿತ್ಯಂ ವೈಷ್ಣವೋ ಮಂತ್ರವಿತ್ತಮಃ । ಆತ್ಮಾರ್ಥಂವಾ ಪರಾರ್ಥಂವಾ ನಚ ದೇವಲಕೋ ಭವೇತ್ । ಇತಿ

ಮತ್ತು-ಕೆಲವರು ಅರ್ಚಕರುಗಳಿಗೆ ಪೂಜಾಂಗವಾಗಿ ಶಾಸ್ತ್ರೀಯವಾಗಿ ಬರಬೇಕಾದದ್ರವ್ಯವನ್ನು ವೇತನವೆಂದು ಅನ್ಯಥಾಭಾವಿಸಿ ವೇತನಗ್ರಹಣದಿಂದಾ ಇವರನ್ನು ನಿಂದ್ಯರಾಗಿ ತಿಳಿಯುವರು. ಪೂಜಾಂಗವಾಗಿ ಬರಬೇಕಾದದ್ರವ್ಯವು ಯಾವದಂದರೆ-

ತಿಲಾನ್ವಸ್ತ್ರಂತಥಾಹೇಮ ತಾಂಬೂಲಂ ತಂಡುಲಾನಪಿ ।
ಫಲಾನಿಕವ್ಯಮಾಘಾರಂ ಗಾಶ್ಚಧಾನ್ಯಂ ಯಥಾವಸು ।
ಗೋಗ್ರಾಸಂ ದೇಶಿಕಾಯೈತ ದ್ದದ್ಯಾದ್ದೇವಸ್ಯ ಸನ್ನಿಧೌ ।
ಅಧಿಪಸ್ಯತಥಾರಾಜ್ಞೋ ರಾಷ್ಟ್ರಸ್ಯ ಸಕಲಸ್ಯಚ ।
ಪ್ರಜಾನಾಂ ಬ್ರಾಹ್ಮಣಾದೀನಾಂ ದಾನಮಭ್ಯುದಯಾವಹಂ ।

ಇತ್ಯಾದಿ ಪ್ರಮಾಣಾನುಸಾರವಾಗಿಮಾತ್ರ ದಾನಾದಿದ್ರವ್ಯಗಳೇ ಯೋರ್ಚಿತಂಪ್ರತಿಗೃಹ್ಣಾತಿ ದದ್ಯಾದರ್ಚಿತಮೇವವಾ । ತಾವುಭಾಗಚ್ಛತಸ್ವರ್ಗಂ ಇತ್ಯಾದಿ ಪ್ರಮಾಣಗಳಿಂದ ಪೂಜಾರೂಪದ್ರವ್ಯಸ್ವೀಕಾರವು ವೇತನರೂಪವಾದ ದೂಷಣೆಗೆ ಗುರಿಯಾಗುವದಿಲ್ಲ

ಆದ್ದರಿಂದ ಅಸಂಬದ್ಧವಾಗಿ ಇವರು ಪದೆಪದೆ ವಚನಗಳು ಕಲ್ಪಿತಗಳೆಂದು ಮಂತ್ರಪಾಠವನ್ನು ಮಾಡುವದು ವ್ಯರ್ಥವು

(೧೩) ಆದ್ದರಿಂದಲೇ ವಾಮನಸಂಹಿತಾವಚನವನ್ನು ಸ್ತೋತ್ರರೂಪವೆಂದು ಹೇಳುವದು ಅಯುಕ್ತವು. ಆವಚನವನ್ನು ಉದಾಹರಿಸುವದಕ್ಕೆ ಉದ್ದೇಶ್ಯವು ಪೂರ್ವದಲ್ಲಿಯೇ ಹೇಳಲ್ಪಟ್ಟಿತು.

ಹೀಗೆ ದೀಕ್ಷಿತರಾಗಿರುವ ಅರ್ಚಕರಿಗೆ ದೇವಲಕತ್ವಾದಿ ದೋಷವಿಲ್ಲದೇ ಇರುವದರಿಂದಲೇ ಶ್ರೀಶಂಕರಾಚಾರ್ಯರು ಆಯಾಯಸ್ಥಳದಲ್ಲಿ ಅರ್ಚಕರಿಗೆ

ನಮಸ್ಕಾರವನ್ನು ಮಾಡಿರುವರೆಂದು ಆನಂದಗಿರಿಕೃತ ಶಂಕರವಿಜಯದಲ್ಲಿ (೬೩)ನೇ ಪ್ರಕರಣದ "ತತ್ರಾರ್ಚಕಾದೀನ್ನತ್ವಾ'' * ಇತ್ಯಾದಿವಾಕ್ಯಗಳಲ್ಲಿ ಸ್ಫುಟವಾಗಿರುವದು ಹೀಗೆ ಆದಿಶಂಕರಾಚಾರ್ಯರಿಗೂ ನಮಸ್ಕಾರಾರ್ಹರಾದ ಅರ್ಚಕರನ್ನು ದೇವಲಕರೆಂದು ದೂಷಿಸುವರು ಗುರುದ್ರೋಹಿಗಳಾಗಲಾರರೊ ? ಇದು ಹೀಗಿರಲಿ.

ಈರೀತಿಯಾಗಿ ಉಕ್ತವಾಮನ ಸಂಹಿತೇಶ್ವರಸಂಹಿತಾ ಪದ್ಮೋದ್ಭವ ಸಂಹಿತಾ ಪರಮಪುರುಷಸಂಹಿತಾ ನಾರದೀಯ ಸಂಹಿತಾದಿವಚನಗಳು ಮೇಲೆ ಹೇಳಿದಂತೆ ನಿಷೇಧವಿಧಿರೂಪವಾಗಿಯೇ ಇರುವದರಿಂದ ಅವುಗಳಿಂದ ಪಂಚರಾತ್ರರೀತ್ಯಾ ದೀಕ್ಷಿತರಲ್ಲದವರು ಪಂಚರಾತ್ರ ಸ್ಥಲದಲ್ಲಿ ಪೂಜೆಯನ್ನೂ ಬಿಂಬಸ್ಪರ್ಶವನ್ನೂ ತತ್ಸಮವಾದ ಗರ್ಭಗೃಹಪ್ರವೇಶವನ್ನೂ ಮಾಡುವದು ಅಸಾಧುವೆಂಬ ನಮ್ಮ ಉದ್ದೇಶ್ಯ ಸಿದ್ಧಿಸುವದಕ್ಕೆ ನಿರಾತಂಕವಾಗಿಯೇ ಇರುವದು ಎಂದು ನಿರ್ಮತ್ಸರರಾದ ಸರ್ವರಿಗೂ ಸುಗಮವಾಗಿರುವದು.

ಇತಿಶ್ರೀ ಭಗವಚ್ಛಾಸ್ತ್ರಭಾಸ್ಕರವೆಂಬ ಪ್ರಬಂಧದಲ್ಲಿ ಅದೀಕ್ಷಿತ ಪೂಜಾದ್ಯನಧಿಕಾರಪ್ರಕಾಶಕವಾದ ಪ್ರಥಮ ಮಯೂಖವು ಸಂಪೂರ್ಣವಾದುದು.

---

* ಕಲಿಕತ್ತಾ ಏಷ್ಯಾಟಿಕ್ ಸೊಸೈಟಿ ಮುದ್ರಿತ. ಪು. (೨೫೧) ಪುಟದಲ್ಲಿ ನೋಡುವದು.

## ॥ ದ್ವಿತೀಯಪುಯೂಖಾರಂಭಃ ॥

ಶ್ರೀಸ್ವಾಮಿಗಳವರು ವಾಹನಾರೂಢರಾಗಿಯೂ, ಪಾದುಕಾಧಾರಿಗಳಾಗಿಯೂ, ದೇವಸ್ಥಾನದಲ್ಲಿ ಸಂಚರಿಸಿದವಿಷಯವು ಸಂಪ್ರೋಕ್ಷಣೆಗೆ ನಿಮಿತ್ತವೆಂದು ಅಖಿಲವೈಷ್ಣವಸಭೆಯವರ ತೀರ್ಮಾನದಲ್ಲಿ ಸೇರದೇಇದ್ದರೂ ಆರೀತಿಯಾಗಿ ಸಂಚರಿಸಕೂಡದೆಂಬುವದಕ್ಕೆ ವಚನವಿದ್ದರೆ ಆ ಪ್ರಮಾಣಗಳನ್ನು ಬರಿಯಬೇಕೆಂದು ಅಪೇಕ್ಷಿಸಿದಕಾರಣ ಆ ವಿಷಯವಾದ ವಚನಗಳುನ್ನು ಉದಾಹರಿಸಲ್ಪಟ್ಟಿತು ಅಷ್ಟುಮಾತ್ರದಿಂದಲೇ ಪಾದುಕಾಧಾರಿಗಳಾಗಿ ಸಂಚರಿಸಿದ್ದು ಸಂಪ್ರೋಕ್ಷಣೆಗೆ ನಿಮಿತ್ತವೆಂದು ನಮಗೆ ಉದ್ದೇಶ್ಯವೆಂದು ಕಲ್ಪಿಸಿಕೊಂಡು ಅಸಂಬದ್ಧವಾಗಿ ಬರೆದು ಇರುವರು ಅದೇನಂದರೆ-

[ "ಶ್ರೀ ಶೃಂಗೇರಿಸ್ವಾಮಿಗಳವರು ಪಾದುಕಾಧಾರಿಗಳಾಗಿ ಆಳ್ವಾರಾಚಾರ್ಯರು ಇರತಕ್ಕಪ್ರಾಕಾರದಲ್ಲಿ ಸಂಚರಿಸಿ ಪ್ರದಕ್ಷಿಣೆಮಾಡಿಧ್ವಜಸ್ತಂಭದ ಬಳಿ ಪಾದುಕೆಗಳನ್ನು ಬಿಟ್ಟದ್ದು ಅಸುಗತವೆಂದು ಸ್ಥಿರಪಡಿಸತಕ್ಕದ್ದು ಎನೇ ಉದ್ದೇಶ್ಯವಷ್ಟೆ. ಇದಕ್ಕೆ ಸಾಧಕವೆಂದು ಉದಾಹರಿಸಲ್ಪಟ್ಟವಚನಗಳು.

ಪಂಚರಾತ್ರರಕ್ಷಾಯಾಂ—ಶ್ರೀ ವರಾಹಪುರಾಣೆ—ಧರಣೀವರಾಹಸಂವಾದೆ-ತೈಲೇನಾಭ್ಯಕ್ತ ಸರ್ವಾಂಗಃ ಉಪಾನದ್ಗೂಢಪಾದಕಃ। ಯೋನರಃಪ್ರವಿಶೇದ್ಗೃಹಂ ಮಮಭೂತಧರೇಶುಭೆ । ಸಯಾತಿಗೃಹಪಾಲಾನಾಂ ಯೋನೌಜನ್ಮತ್ರಯಂಶುಭೆ । ತತ್ರೈವಾನ್ಯತ್ರ ಭಗವದಪಚಾರ ಪರಿಗಣನೆ—ಯಾನೈರ್ವಾಪಾದುಕಾಭಿರ್ವಾಗಮನಂ ಭಗವದ್ಗೃಹೇ। ಇತ್ಯುಪಕ್ರಮ್ಯ ಉಪಚಾರಶತೇನಾಪಿ ನಕ್ಷಮಾಮಿ ವಸುಂಧರೆ। ಎಂದು ಬರದಿಧೆ-(೧)ಈ ಪಾಂಚರಾತ್ರರಕ್ಷಾಎಂಬುವ ಗ್ರಂಧವೇ ಆಧುನಿಕರಾದ ಶ್ರೀವೈಷ್ಣವರಿಂದ ಕಲ್ಪಿತವಾದದ್ದು (೨)ಅದರಲ್ಲಿರುವ ವಚನವು ವರಾಹಪುರಾಣದಲ್ಲಿರುವದು ಎಂದು ಹೇಳಿದರೂ ಆವಚನದಲ್ಲೇ (ಉಪಾನದ್ಗೂಢಪಾದಕಃ) ಎಂದು ಸ್ಪಷ್ಟವಾಗಿ ಇರುವದ್ದರಿಂದ ಕಾಲುಗ

ಳನ್ನ ಮುಚ್ಚಿಕೊಳ್ಳುವ ಚರ್ಮಮಯವಾದ ಅಶುಚಿಯಾದ ಜೋಡುಗಳನ್ನು ಹಾಕಿಕೊಂಡು ಬರಬಾರದೆಂದು ಅದಕ್ಕೆ ಅರ್ಥವೇಹೊರತ್ತು ಪರಿಶುದ್ಧವಾದ ದಾರುರಜತಾದಿ ಮಯವಾಗಿಯೂ, ಪಾದಗಳಿಗೆ ಅಸ್ಪೃಶ್ಯಸ್ಪರ್ಶ ಉಂಟಾಗದಂತೆ ಪಾದಾಧಾರವಾಗಿಯೂ, ಯತಿಗಳಿಗೆ ಸರ್ವದಾ ಧಾರಣೀಯವಾದ ಪಾದುಕೆಗಳನ್ನ ಧರಿಸುವದಕ್ಕೆ ಈವಚನವು ಬಾಧಕವಾಗಲಾರದು. ಇಂಥಾ ಪಾದುಕೆಗಳನ್ನ ಧರಿಸಿದ್ದರಿಂದ ಉಪಾನದ್ಗೂಢಪಾದಕತ್ವ ಬರುವದಿಲ್ಲವು.

(೩) ಶ್ರೀಜಗದ್ಗುರು ಸ್ವಾಮಿಗಳವರು ಧರಿಸಿದ ಪಾದುಕೆಗಳನ್ನ ಬ್ರಾಹ್ಮರು ಸಹ ಪ್ರೋಕ್ಷಣಮಾಡಿ ತೀರ್ಥವನ್ನುಸಹ ತೆಗದುಕೊಳ್ಳುತ್ತಾರೆ "] ಎಂದು ಬರೆದಿರುತ್ತೆ ಇದು ಅಸಂಗತವು. ಹ್ಯಾಗಂದರೆ—ಶ್ರೀಪಂಚರಾತ್ರರಕ್ಷೆ ಎಂಬುವದು ಆಧುನಿಕರಿಂದ ಕಲ್ಪಿತವಾಗಿದ್ದಾಗ್ಯೂ, ಅದರಲ್ಲಿ ಇರುವ ವರಾಹ ಪುರಾಣವಚನವು ಕಲ್ಪಿತವಾಗಲಾರದಷ್ಟೆ ಆದರೆ- ಇವರಿಗೆ ಕೂಟಸ್ಥರಾದ ಶ್ರೀವಿದ್ಯಾರಣ್ಯರ ಚರಿತ್ರವನ್ನು ಇವರು ಮರೆಯದೇ ಸ್ಮೃತಿಯಲ್ಲಿಟ್ಟುಕೊಂಡಿದ್ದ ಪಕ್ಷದಲ್ಲಿ ಅಂಥಾ ಶ್ರೀ ವಿದ್ಯಾರಣ್ಯರಿಗೂ, ಶ್ರೀಮದಕ್ಷೋಭ್ಯತೀರ್ಥರಿಗೂ, ವಾದಪ್ರಸಕ್ತವಾದ ಕಾಲದಲ್ಲಿ ವಾದಿಪ್ರತಿವಾದಿಗಳಿಂದ ಮಾಧ್ಯಸ್ಥ್ಯಕ್ಕಾಗಿ ಅಭ್ಯರ್ಥಿಸಲ್ಪಟ್ಟ ಮಹಾನುಭಾವರಾದ ಜ್ಞಾನವೈರಾಗ್ಯಾದಿ ಗುಣಗಣನಿಧಿಗಳಾದ ಶ್ರೀ ಪಂಚರಾತ್ರ ರಕ್ಷಾಕರ್ತರು ಆಧುನಿಕರೊ-ಅಥವಾ ಪ್ರಾಚೀನರೋ ಎಂಬ ವಿಷಯವು ಸ್ಫುಟವಾಗಿ ಇವರಿಗೆ ಗೋಚರವಾಗಬಹುದಾಗಿ ಇತ್ತು .

(೪) 'ಉಪಾನದ್ಗೂಢಪಾದಕಃ' ಎನ್ನುವದರಲ್ಲಿ ಗೂಢಪದಕ್ಕೆ ರಕ್ಷಿತವೆಂದು ಅರ್ಥವಾದಕಾರಣ ಇವರು ಮುಚ್ಚಲ್ಪಟ್ಟ ಎಂದುಮಾಡಿದ ಅರ್ಥವೆ ಅಸಂಗತವು ಅವರ ಅರ್ಥವನ್ನು ಸ್ವೀಕರಿಸಿದಾಗ್ಯೂ ಪಾದದ ಅಧೋಭಾಗವು ಮುಚ್ಚಲ್ಪಟ್ಟದ್ದಾಗಿಯೇ ಇರುವದರಿಂದ ಪಾದುಕೆಯನ್ನು ಧರಿಸಿದಾಗ್ಯೂ, ಉಪಾನದ್ಗೂಢಪಾದಕತ್ವ ಬರದೇ ಇರಲಾರದು. "ಯಃಪ್ರಾವೃತ

ಶಿರಾ ಭುಂಕ್ತೆ " ಇತ್ಯಾದಿಗಳಲ್ಲಿ ತಲೆಯಲ್ಲಿ ಸ್ವಲ್ಪ ಭಾಗ ಮುಚ್ಚಿಕೊಂಡು ಭೋಜನಮಾಡಿದರೂ ಅದು ನಿಷಿದ್ಧವೆಂದು ಶಾಸ್ತ್ರಜ್ಞರು ಹೇಳುವರು.

ವರಾಹಪುರಾಣದ ೧೩೬ ನೇ ಅಧ್ಯಾಯದಲ್ಲಿ " ಪಹನ್ನುಪಾನಹೌ ಪದ್ಭ್ಯಾಂ ಯಸ್ತು ಮಾಮುಪ ಸಂಕ್ರಮೇತ್ । ಚರ್ಮಕಾರಸ್ತು ಜಾಯೇತ ವರ್ಷಾಣಾಂತು ತ್ರಯೋದಶ " ಎಂದು ಉಪಾನತ್ತನ್ನು ವರ್ಜಿಸುವದು. ಅಂದರೆ ಪಾದದಿಂದ ಧರಿಸುವದೇ ಸಾಮಾನ್ಯವಾಗಿ ನಿಷಿದ್ಧವಾಗಿರುವದು " ಸೋಪಾನತ್ಕಶ್ಚಾಶನಾಭಿವಾದನ ನಮಸ್ಕಾರಾನ್ವರ್ಜಯೇತ್ " ಎಂಬ ಗೌತಮಧರ್ಮಸೂತ್ರದಲ್ಲಿ ಉಪಾನತ್ಪದವಿದ್ದರೂ ವ್ಯಾಖ್ಯಾಕರ್ತರಾದ ಹರದತ್ತಾಚಾರ್ಯರು " ಉಪಾನದ್ಗ್ರಹಣಂ ಪಾದುಕೋಪಲಕ್ಷಣಂ" ಎಂದು ಹೇಳಿ ಉಪಾನತ್ತನ್ನು ನಿಷೇಧಿಸುವ ಸ್ಥಲದಲ್ಲಿ ಪಾದುಕೆ ಸಹ ನಿಷೇಧಿಸಲ್ಪಡುವದೆಂದು ಬೋಧಿಸಿರುವರು.

ಯಾನೈರ್ವಾ ಪಾದುಕಾಭಿರ್ವಾ ಗಮನಂ ಭಗವದ್ಗೃಹೆ । ಇತ್ಯುಪಕ್ರಮ್ಯ—

ಉಪಚಾರಶತೇನಾಪಿ ನಕ್ಷಮಾಮಿ ವಸುನ್ಧರೆ ।

ಎಂದು ಪಾದುಕೆಯನ್ನು ಸಹ ನಿಷೇಧಿಸುವ ವರಾಹಪುರಾಣದಲ್ಲಿ ಇರುವ ವಚನವನ್ನು ಉದಾಹರಿಸಿದಾಗ್ಯೂ ಅದು ಮಾತ್ಸರ್ಯವೆಂಬ ಕಣ್ಬೇನೆಯುಳ್ಳ ಇವರಿಗೆ ದೃಷ್ಟಿವಿಷಯವಾಗಲಿಲ್ಲವೆಂದು ತೋರುತ್ತೆ. ಒಂದುವೇಳೆ ಪಾಂಚರಾತ್ರ ರಕ್ಷೆಯಲ್ಲಿ ಉದಾಹೃತವಾದ್ದರಿಂದ ಆ ವಚನದಲ್ಲಿ ಇವರಿಗೆ ದ್ವೇಷವಿದ್ದರೆ ನಿರ್ಣಯಸಿಂಧು ವ್ಯಾಖ್ಯಾ ಕೃಷ್ಣಭಟ್ಟೀಯಾದಿಗಳಲ್ಲಿ ಸ್ಮಾರ್ತರೂ ಆ ವಚನವನ್ನು ಉದಾಹರಿಸಿರುವದನ್ನು ಸ್ವಲ್ಪ ನೋಡಿ ದ್ವೇಷವನ್ನು ಬಿಡಬಹುದು.

ನಯಾನಪಾದುಕಾರೂಢೋ ನಸೋಪಾನತ್ಕಪಾದಭೃತ್ ।

ಎಂದು ಈಶ್ವರಸಂಹಿತೆಯಲ್ಲಿ—ಭಗವದುಪಸರ್ಪಣ ಪ್ರಕರಣದಲ್ಲಿ ಸ್ಪಷ್ಟವಾಗಿಯೇ ಪಾದುಕಾಧಾರಣನಿಷೇಧವೂ ಇರುತ್ತೆ. ವಸುಂಧರೆ ಉಪಾನಚ್ಛಬ್ದವು

“ ಅಥಪಾದುಕಾ ಪಾದೂರು ಪಾನತ್ ” ಎಂದು ಅಮರಕೋಶದಲ್ಲಿ ಪರ್ಯಾಯ ವಾಗಿಯೇ ಪಠಿತವಾಗಿರುವದ್ದರಿಂದಲೂ, “ ಉಪಾನಹಂ ದಾರುಮಯೀಂಪದಾ ಸ್ಪೃಶೇತ್ ” ಇತ್ಯಾದಿ ಮಹಾಕವಿಪ್ರಯೋಗ ಎರುವದ್ದರಿಂದಲೂ ಪ್ರಕರಣಾ ನುಸಾರ ವರಾಹಪುರಾಣದಲ್ಲಿ ಉಪಾನತ್ಪದದಿಂದ ದಾರುಪಾದುಕೆಯೂ ಗ್ರಹಿಸ ಲ್ಪಡುವದು ಎಂದು ಶಾಸ್ತ್ರಜ್ಞರು ಧಾರಾಳವಾಗಿ ನಿರ್ಣಯಿಸುವರು.

“ ಯತಿಗಳಿಗೆ ಸರ್ವಸಾಧಾರಣೀಯವಾದ ಪಾದುಕೆಯನ್ನು ” ಎಂದು ಇವರು ಬರೆದಿರುವದನ್ನ ಸ್ನಾನದಪ ಪೂಜಾದಿಕಾಲದಲ್ಲಿ ಧರಿಸದೇ ಇರುವ ಶ್ರೀ ಶೃಂಗೇರೀಸ್ವಾಮಿಗಳೇ ಎಂದಿಗೂ ಒಪ್ಪಲಾರರು. (೩)ಶ್ರೀ ಶೃಂಗೇರೀಸ್ವಾ ಮಿಗಳ ಪಾದುಕೆಯು ಅವರ ಶಿಷ್ಯರಾದವರಿಗೆ ಶ್ರೇಷ್ಠವಾಗಿದ್ದಾಗ್ಯೂ ದೇವ ರಿಗೂ ಮತ್ತು ಅವರಿಗೂ ಶ್ರೇಷ್ಠವಾಗಲಾರದು ಆದ್ದರಿಂದ ಶಾಸ್ತ್ರವು ಎಲ್ಲಾ ಪಾದುಕೆಗಳಂತೆ ಅದನ್ನು ನಿಷೇಧಿಸುವದಕ್ಕೆ ಹಿಂಜರಿಯಲಾರದು.

ಅನಂತರ [ “ ಆದರೆ ಪರಿಶುದ್ಧವಾಗಿಯು ಇಂಥಾದಾರು ರಜತಾದಿಮ ಯವಾದ ಪಾದುಕೆಗಳನ್ನಾಗಲಿ ಯಾತಕ್ಕೆ ಧರಿಸಿಕೊಂಡು ದೇವಾಲಯದಲ್ಲಿ ಸಂಚಾರಮಾಡಿದರು. ಈಜಗದ್ಗುರುಗಳವರಿಗೆ ದೇವರಲ್ಲಿ ಭಕ್ತಿಇಲ್ಲವೆಂದುಹೇಳೋ ಣವಂದರೆ ಅದಕ್ಕೆ ಅವಕಾಶವಿಲ್ಲವು. ಪ್ರಾಯಶಃ ಶಿವವಿಷ್ಣ್ವಾದಿ ದೇವಾಲ ಯಗಳಲ್ಲಿ ಅನ್ನ ಮೊದಲಾದ ದೇವತಾ ಪ್ರಸಾದಗಳನ್ನು ಬ್ರಾಹ್ಮರು ; ಶೂದ್ರಾ ದಿಗಳುಸಹ ಇಟ್ಟುಕೊಂಡಿರುವ ಪದ್ಧತಿಯುಂಟು. ಅಂಥಾ ಸಂದರ್ಭಗಳಲ್ಲಿ ಅನ್ನಾದಿ ಲೇಪಗಳು ಪ್ರಾಕಾರಗಳಲ್ಲಿ ಸಂಚರಿಸುವವರಿಗೆ ಪ್ರಾಯಶಃ ಆಗುತ್ತೆ ಆಪಸ್ತಂಬಧರ್ಮಸೂತ್ರದಲ್ಲಿ—ಅನ್ನಲೇಪಾನುಚಿಷ್ಟಲೇಪಾನ್ರೆತಸಶ್ಚಯೆಲೇ ಪಾನ್ತ್ಸ್ಪೃಶ್ಯ । ಪ್ರಕ್ಷಾಲ್ಯಪಾದಾಚಾಚಮ್ಯ ಪ್ರಯತೋಭವತಿ ಎಂಬದಾಗಿ ಅನ್ನಾದಿಲೇಪಗಳು ಉಂಟಾದರೆ ಅದನ್ನ ತೊಳದುಕೊಂಡು ಆಚಮನ ಮಾಡಬೇಕೆಂದು ಹೇಳಿ ಇರುವದ್ದರಿಂದ ತಮಗೆ ಅಂಥಾ ಸ್ಪರ್ಶ್ಯಉಂಟಾಗದೆ ಇರುವದಕೊಸ್ಕರ ಈ ಜಗದ್ಗುರುಸ್ವಾಮಿಗಳು ಶಿವವಿಷ್ಣ್ವಾದಿಯಾವ

ದೇವಸ್ಥಾನ ಪ್ರಾಕಾರಗಳಲ್ಲಿಯೂ ಪಾದುಕಾಧಾರಿಗಳಾಗಿಯೇ ಸಂಚರಿಸತಕ್ಕದ್ದು ಇವರಿಗೆ ಬಹುಕಾಲ ಮೊದಲುಗೊಂಡು ಪದ್ಧತಿಯಾಗಿ ರುವದ್ದರಿಂದ ಬಾಧಕವಿಲ್ಲವು ” ] ಎಂದು ಬರದುಇರುತ್ತೆ ಆದರೆ ಪ್ರಾಕಾರಗಳಲ್ಲಿ ಅನ್ನಲೇಪ ಸಮ್ಭಾವನೆಯುಂಟಾಗುವವರಿಗೆ ದೇವಸ್ಥಾನದ ಗರ್ಭಗೃಹಪರ್ಯಂತವಾದ ಒಳಭಾಗದಲ್ಲಿಯು ಆಸಂದೇಹವು ಉಂಟಾಗದೇ ಇರುವದು ಆಶ್ಚರ್ಯವು. ಈರೀತಿಯಾಗಿ ಪಾಪಭೀರುಗಳಾದವರು ದೇವಸ್ಥಾದನ ಒಳಭಾಗದಲ್ಲಿ ಸಂಭವಿಸಬಹುದಾದ ಅನ್ನಲೇಪಾದಿ ದೋಷವನ್ನು ಸ್ವೀಕರಿಸಿಕೊಂಡವರು ಪ್ರಾಕಾರದಲ್ಲಿ ಯಾತಕ್ಕೆ ಸೈರಿಸಿಕೊಳ್ಳಬಾರದು ? ಮತ್ತು ಅಂಥಾ ದೇವಸ್ಥಾನಕ್ಕೆಯಾಕೆ ಪ್ರವೇಶಮಾಡಬೇಕೊ? ಪ್ರಾಜಾವೈಗುಣ್ಯವನ್ನು ಯಾತಕ್ಕೆ ಮಾಡಬೇಕೊ? ತಿಳಿಯದು —ಪಾದುಕಾ ಸಂಚಾರಪ್ರಯುಕ್ತ ಸಂಪ್ರೊಕ್ಷಣೆ. ಆಗಬೇಕೆಂನ್ನುವದನ್ನ ಯಾರೂ ಹೇಳಲಿಲ್ಲ ಆದಾಗ್ಯೂ

ದೇವಾಲಯೆಷ್ವ ಕರ್ತವ್ಯೆ ಕೃತೆಕರ್ಮಣಿ ಕುತ್ರಚಿತ್ ।
ಮಧ್ಯಮಾವರಣಾದನ್ತ ಸ್ನಪನಂ ಹೋಮಪಶ್ಚಿಮಂ॥

ಎಂಬ ಪಾರಮೇಶ್ವರ ಪ್ರಾಯಶ್ಚಿತ್ತಾಧ್ಯಾಯದಲ್ಲಿ ಇರುವ ವಚನದಿಂದ ದೇವಾಲಯದ ಮಧ್ಯಮಾವರಣಪರ್ಯಂತಭಾಗದಲ್ಲಿ ಅಕರ್ತವ್ಯವಾದ ಯಾವಕಾರ್ಯ ನಡಿಸಿದಾಗ್ಯೂ ಪ್ರಾಯಶ್ಚಿತ್ತವು ಸಂಪ್ರತಿಪನ್ನವಾಗಿರುವದ್ದರಿಂದ ಇದು ಕೂಡ ಸಂಪ್ರೋಕ್ಷಣನಿಮಿತ್ತವಾಗುವದಕ್ಕೆ ಸಂದೇಹವಿಲ್ಲ. ಹೀಗೆ ಸರ್ವಥಾ ಶಾಸ್ತ್ರವಿರುದ್ಧವಾದ ಕಾರ್ಯವನ್ನು ಪದ್ಧತಿ ಎಂದು ಹೇಳಿ ಪರಿಗ್ರಹಿಸುವ ಪಕ್ಷದಲ್ಲಿ ಯಾರುತಾನೆ ಅವರವರು ಮಾಡುವ ಅಕಾರ್ಯವನ್ನು ಪದ್ಧತಿ ಎಂದು ಹೇಳಲಾರರು ?

ಅನಂತರ—[ “ ಅಥವಾ ಯಾವದೇವರ ಮುಂದೆಯೂ ಪಾದುಕಾಧಾರಿಗಳಾಗಿ ಹೋಗಬಾರದೆಂದು ಹೇಳೋಣವೆಂದರೆ ಮೇಲ್ಕಂಡ ವಚನಗಳನ್ನ ತಿಳಿದು ಒಪ್ಪಿ ಪರಿಶೀಲನೆಮಾಡಿದ ಶ್ರೀ ಪರಕಾಲಸ್ವಾಮಿಗಳವರೇ

ಅರಮನೆಗೆ ಉತ್ಸವಾದಿಗಳಿಗೆ ದಯಮಾಡಿಸುವಾಗ ಆತ್ಮವಿಲಾಸದ ವಿನಾಯಕ ನಮುಂದೆ ಅತಿಸಮೀಪವಾಗಿ ಪಾದುಕಾಯುಕ್ತಪಾದರಾಗಿ ಅಂಬಾವಿಳಾಸಕ್ಕೆ ದಯಮಾಡಿಸುವಾಗಲೂ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ರಥೋತ್ಸವಕಾಲದಲ್ಲಿ ದೇವರಮುಂದೆ ಪಾದುಕೆಗಳನ್ನ ಧರಿಸಿ ಸಂಚಾರಮಾಡುವಾಗಲೂ ಯಾವಗ್ರಂಥ ದಲ್ಲಿ ಯಾವವಚನಗಳ ಆಧಾರದೊರಿಯುತ್ತೊ ಅದೇಗ್ರಂಥದಲ್ಲಿಯೇ ಶ್ರೀ ಶೃಂ ಗೇರಿ ಸ್ವಾಮಿಗಳವರು ಶ್ರೀ ರಂಗನಾಥಸ್ವಾಮಿ ದೇವಸ್ಥಾನದಲ್ಲಿ ಪಾದುಕೆಗ ಳನ್ನ ಧರಿಶಿ ಸಂಚರಿಸುವದಕ್ಕೂ ಆಧಾರವಾದ ವಚನಗಳು ದೊರೆಯುವ ದಕ್ಕೆ ಏನೂಅಭ್ಯಂತರವಿಲ್ಲ" ] ಎಂದು ಬರದಿರುತ್ತಾರೆ-ಇದು ಅಸಂಗತವು. ಯಾಕಂದರೆ—ಉದಾಹೃತ ವರಾಹಪುರಾಣದಲ್ಲಿ ಭಗವದಾಲಯದಲ್ಲಿ ಯಾನಾ ರೂಢರಾಗಿಯಾಗಲೀ ಪಾದುಕಾ ಧಾರಿಗಳಾಗಿಯಾಗಲೀ ಸಂಚರಿಸಬಾರದೆಂದು ಇರುತ್ತದೆಯೇ ಹೊರ್ತು ಇತರಸ್ಥಳದಲ್ಲಿ ನಂಚರಿಸ ಬಾರದೆಂದು ಇಲ್ಲ

ಆತ್ಮವಿಲಾಸದಲ್ಲಿರುವ ವಿನಾಯಕನಿಗೆ ಅತಿಸಮೀಪವಾದ ಮುಂಭಾಗ ದಲ್ಲಿ ಮ್ಲೇಚ್ಛ ಹೂಣಾದಿಗಳು ಸಹ ಸಂಚರಿಸುವರಾದ್ದರಿಂದ ಆಭಾಗವು ಭಗವದಾಲಯಕ್ಕೆ ಶೇರಿದ್ದಲ್ಲವೆಂದು ಎಲ್ಲರೂ ಒಪ್ಪಿಕೊಳ್ಳಬೇಕು. ಆದಕಾರಣ ಅಲ್ಲಿ ಸಂಚರಿಸಲಿಕ್ಕೆ ಯಾವಬಾಧೆಯೂ ಇಲ್ಲ. ರಥೋತ್ಸವಾದಿ ಕಾಲದಲ್ಲಿಯೂ ದೇವರಮುಂದೆ ಯಾರೂ ಪಾದುಕೆಗಳನ್ನು ಧರಿಸಿ ಸಂಚರಿಸುವದಿಲ್ಲ

ಅನಂತರ—[ "ಮತ್ತು (ಉಪಾನದ್ಗೂಢಪಾದಕಃ) ಎಂಬ ವಚ ನದಿಂದ ಕಾಲುಮುಚ್ಚುವ ಜೋಡುಗಳಿಂದ ಮುಚ್ಚಲ್ಪಟ್ಟ ಪಾದವುಳ್ಳ ವನೆಂದು ಅರ್ಥವಾಗೋಣದರಿಂದಲೇ ಪರವೈಕಾಂತಿಗಳಾದ ಕೆಲವು ಶ್ರೀವೈಷ್ಣವರು ಸ್ನಾನಮಾಡಿ ಮಡಿಉಟ್ಟುಕೊಂಡು ದೇವರಿಗೆಅಗ್ರೋದ ಕಾದಿಗಳನ್ನತರುವಾಗ ಕಾಲುಮುಚ್ಚದೆ ಇರುವ ಚರ್ಮಮಯವಾದ ಎಕ್ಕ ಡಗಳನ್ನು ಮೆಟ್ಟಿಕೊಂಡು ಇರತಕ್ಕರೂಢಿ ಇದೆ. ಅವರಿಗೂ ಈವಚನ ವೇ ಆಧಾರವಾಗಿರಬಹುದು"] ಎಂದಿರುತ್ತೆ. ಇದು ಆವಚನದಲ್ಲಿ ಗೂಢಪದಕ್ಕೆ

ರಕ್ಷಿತವೆಂದು ಅರ್ಥಹೇಳಿರುವದರಿಂದಲೇ ಅಸಂಗತವಾಗಿರುವದು

ಮತ್ತು—ಕುಂಭಜಲಂ ಸಮಾದಾಯ ವಸ್ತ್ರೇಣಾಚ್ಛಾದ್ಯ ತನ್ಮುಖಂ।
ಮೂರ್ಧ್ನಿಸಂಸ್ಥಾಪ್ಯತತ್ಕುಂಭಂ ಸೋಪಾನತ್ಕೋಗೃಹಂವ್ರಜೇತ್।
ಉಪಾನಹೌ ಬಹಿಸ್ತ್ಯಕ್ತ್ವಾ ಕುಂಭಂದೇವ ಗೃಹೇನ್ಯಸೇತ್ ।

ಇತ್ಯಾದಿ ಪಾಂಚಕಾಲಿಕ ಪದ್ಧತಿ ಧೃತವಾಸಿಷ್ಠ ವಚನಗಳನ್ನು ಅನುಸರಿಸಿ ಪರಮೈಕಾನ್ತಿಗಳು ಚರ್ಮಮಯವಾದ ಪಾದರಕ್ಷೆಯನ್ನು ಕಾಲಿನಲ್ಲಿ ಧರಿಸಿ ಅಗ್ರೋದಕಾದಿಗಳನ್ನು ತಂದರೂ ಆ ವಚನಗಳಿಗೆ ವಿರೋಧವಾಗಿ ಅದನ್ನು ಹಾಕಿಕೊಂಡು ದೇವಸ್ಥಾನದ ಒಳಕ್ಕೆ ಎಂದಿಗೂ ಪ್ರವೇಶಿಸುವದಿಲ್ಲ.—ಆದ್ದರಿಂದ ಪರಮೈಕಾಂತಿಗಳ ಆಚಾರವು ಇವರ ಇಷ್ಟಕ್ಕೆ ಸಾಧಕಗಳಲ್ಲದೆ ಬಾಧಕಗಳಾಗಿಯೇ ಇರುವದು

ಅನಂತರ [" ಮತ್ತು (೧) ಆಳ್ವಾರಾಚಾರ್ಯರು ಇರುವ ಪ್ರಾಕಾರದಲ್ಲಿ ಪಾದುಕಾಧಾರಿಗಳಾಗಿ ಸಂಚರಿಸಿದರೆಂದುನ್ನು ಇದು ಅಸಂಗತವೆಂದುನ್ನು ಈ ಆಳ್ವಾರುಗಳಿಗೆ ನಮಸ್ಕಾರ ಸಹ ಮಾಡದೇಲೂ ಕೈಗಳನ್ನು ಸಹ ಮುಗಿಯದೆ ಇರುವ ಭಿನ್ನಪ್ರಸ್ಥಾನರಾದ ಒಬ್ಬರು ಶ್ರೀನುನ್ಮಧ್ವ ಮತಸ್ಥರು ಆಕ್ಷೇಪಿಸಿದ್ದಾಗಿ ಶ್ರೀವೈಷ್ಣವ ಪ್ರೊಸಿಡಿಂಗ್ಸ್‌ನಲ್ಲಿ ಬರಿಯಲ್ಪಟ್ಟಿಧೆಯೆ ಹೊರ್ತು (೨) ಇದಕ್ಕೆ ಯಾವ ಪ್ರಮಾಣವ್ರೂ ದೊರಿಯಿಲಿಲ್ಲವಾದ್ದರಿಂದ ಬರಿಯಲಿಲ್ಲವು. (೩) ಈಪ್ರಕಾರ ಆಳ್ವಾರುಗಳವ್ನ ಪ್ರತಿಷ್ಠೆ ಮಾಡುವದಕ್ಕೂ ಪ್ರಮಾಣವಚನಗಳನ್ನು ಬರಿಯಲಿಲ್ಲವು. (೪) ಆದರೆ ಈ ಆಳ್ವಾರಾಚಾರ್ಯರಲ್ಲಿ ಕೆಲವರು ಮಾತ್ರ ಬ್ರಾಹ್ಮಣರಾಗಿ ದೊರಿಯಬಹುದಾದಾಗ್ಯೂ ಅವರಗಳಿಗಿಂತಲೂ ಹೆಚ್ಚಾದ ಜಗದ್ಗುರುತ್ವವನ್ನ ವಹಿಸಿರುವ ಈ ಶೃಂಗೇರಿ ಸ್ವಾಮಿಗಳವರು ಅವರಿಗೆ ಮರ್ಯಾದೆ ಮಾಡಬೇಕಾದ ಪ್ರಕೃತವಿಲ್ಲವು"] ಎಂದು ಬರೆದಿರುತ್ತಾರೆ.

೧. ಭಗವದ್ಭಕ್ತರನ್ನು ಭಗವಂತನಂತೆ ಗೌರವಿಸಬೇಕೆಂದು ಹೇಳುವ ಶಾಸ್ತ್ರ

ವನ್ನು ಪರ್ಯಾಲೋಚಿಸಿದ ಮಹನೀಯರಾದ ಮಧ್ವಮತಸ್ಥರು ಸ್ಮಾರ್ತರು ಇತರರು ಸಹ ದೇವಸ್ಥಾನದಲ್ಲಿ ಆಳ್ವಾರಾಚಾರ್ಯರ ಮುಂಭಾಗದಲ್ಲಿ ಪಾದುಕಾ ಧಾರಣಾದಿಗಳಿಂದ ಆಳ್ವಾರಾಚಾರ್ಯರುಗಳಿಗೆ ಅಪಮಾನ ಮಾಡುವದಕ್ಕೆ ಎಂದಿಗೂ ಉದ್ಯೋಗಿಸಲಾರರು (೨) ಆಳ್ವಾರಾಚಾರ್ಯರು ಇರುವ ಪ್ರಾಕಾರವು ದೇವಸ್ಥಾನದ ಒಳಭಾಗಕ್ಕೆ ಶೇರಿರುವದರಿಂದ ದೇವಸ್ಥಾನದ ಒಳಭಾಗದಲ್ಲಿ ಪಾದುಕಾಧಾರಿಗಳಾಗಿ ಸಂಚರಿಸಕೂಡದೆಂಬುವದಕ್ಕೆ ಸಾಧಕವು ಪ್ರಮಾಣವಾದ—

ಯಾನೈರ್ವಾ ಪಾದುಕಾಭಿರ್ವಾ ಗಮನಂ ಭಗವದ್ಗೃಹೆ ।

ಉಪಚಾರ ಶತೇನಾಪಿ ನಕ್ಷಮಾಮಿ ವಸುಂಧರೆ ।

ಇತ್ಯಾದಿ ವರಾಹ ಪುರಾಣವಚನವನ್ನು ಉದಾಹರಿಶಿರುವಲ್ಲಿ ಇದಕ್ಕೆ ಪ್ರಮಾಣ ವಚನವು ಬರಿಯಲಿಲ್ಲವೆಂದು ಅಪಲಾಪ ಮಾಡಿರುವದನ್ನು ಮಧ್ಯಸ್ಥರು ಪರ್ಯಾಲೋಚಿಸಬೇಕು

(೩) ದೇವಸ್ಥಾನವನ್ನು ಕಟ್ಟುವದಕ್ಕೂ ದೇವರ ಪ್ರತಿಷ್ಠೆಯನ್ನು ಮಾಡುವದಕ್ಕೂ ಯಾವಶಾಸ್ತ್ರದಲ್ಲಿ ಪ್ರಮಾಣವಿರುವದೋ ಅದೇಶಾಸ್ತ್ರದಲ್ಲಿಯೆ ಭಗವದ್ಭಕ್ತಾಗ್ರಗಣ್ಯರಾದ ಆಳ್ವಾರಾಚಾರ್ಯರುಗಳನ್ನು ಪ್ರತಿಷ್ಠೆಮಾಡುವದಕ್ಕೂ ಪ್ರಮಾಣವಿರುವದು. ದೇವಸ್ಥಾನವನ್ನು ಕಟ್ಟುವದೇ ಮೊದಲಾದ ವಿಷಯದಲ್ಲಿ ಪ್ರಮಾಣವನ್ನು ಬರಿಯತಕ್ಕದ್ದು ಅಪ್ರಕೃತವೆಂದು ಹ್ಯಾಗೆ ಬರಿಯಲಿಲ್ಲವೊ ಹಾಗೆಯೆ ಆಳ್ವಾರಾಚಾರ್ಯರುಗಳನ್ನು ಪ್ರತಿಷ್ಠೆ ಮಾಡುವದಕ್ಕೂ ಪ್ರಮಾಣವಚನಗಳನ್ನು ಬರಿಯದೆ ಬಿಟ್ಟೆವು. ಆದಾಗ್ಯೂ ಎಲ್ಲರಿಗೂ ಸ್ಪಷ್ಟಪಡಿಸುವದಕ್ಕಾಗಿ ಆ ವಚನಗಳು ಈ ಕೆಳಗೆ ಬರೆಯಲ್ಪಡುತ್ತವೆ.

ಮುನಯಃ—ಭಗವನ್ಮಂದಿರೆ ವಿಷ್ಣೋಃಸ್ಥಾಪಿತಾ ಲೋಕಪೂಜಿತಾಃ ।

ವಿಷ್ಣುಭಕ್ತಾಃ ಕಥಂಪೂಜ್ಯಾಃ ತದ್ವಿಧಾನಂ ವದಸ್ವನಃ ।

ನಾರದಃ—ಏಕಾಂತಿನೋ ಮಹಾಭಾಗಾ ಶ್ವೇತಕೋಪ ಪುರಸ್ಸರಾಃ ।
ಕ್ಷೋಣ್ಯಾಂಕೃತಾವತಾರಾಯೆ ಲೋಕೋಜ್ಜೀವನಹೇತವಃ ॥
ಶಾಂಡಿಲ್ಯಾದ್ಯಾಶ್ಚ ಯೇಚಾನ್ಯ ಪಂಚರಾತ್ರಪ್ರವರ್ತಕಾಃ ।
ಪ್ರಹ್ಲಾದಶ್ಚೈವ ಸುಗ್ರೀವೋ ವಾಯುಸೂನುರ್ವಿಭೀಷಣಃ ।
ಯೇಚಾನ್ಯೇ ಸನಕಾದ್ಯಾಶ್ಚ ಪಂಚಕಾಲ ಪರಾಯಣಾಃ ॥
ಭಕ್ತೋತ್ತಮಾಸ್ತು ವಿಜ್ಞೇಯಾ ಸ್ತಾರ್ಕ್ಷವಿಷ್ವಕ್ಸೇನಾದಿಷು ॥
ಚಲಸ್ಥಿರವಿಭಾಗೇನ ಲೋಹೈರ್ವಾ ಶಿಲಯಾಪಿವಾ ।
ಮೃಣ್ಮಯಾ ವ್ಯಥಾಶೋಭಂ ಪೈಶಾಚಸ್ಥಾನ ಕೇಧವಾ ।
ನಿರ್ಮಾಯಚ ವಿಧಾನೇನ ಪ್ರಾಂಕಣೇ ಮಂಟಪೇಧವಾ ॥
ಸ್ವಸ್ವಮಂತ್ರೈಃ ಪ್ರತಿಷ್ಠಾಪ್ಯ ವಿಧಿವಚ್ಛ್ರದ್ಧಯಾರ್ಚಯೇತ್ ॥
ದೀಕ್ಷಾಗುರೋಶ್ಚ ಪ್ರತಿಮಾಂ ಸ್ಥಾಪಯೇನ್ಮಂತ್ರಸಿದ್ಧಯೆ ... ...

ಸ್ಥಾಪನಂಪ್ರತಿಕಾಯಾನಾಂ ಬ್ರಹ್ಮಸ್ಥೈವಾತ್ರಸಂಶಯಃ । ಪ್ರತ್ಯಹಂಚಾರ್ಚನಂತೇಷಾಮುಪಚಾರೈಃ ಪೃಥಗ್ವಿಧೈಃ । ಕರ್ತವ್ಯಮುತ್ಸವಂಚಾಪಿ ಧ್ವಜಾರೋಹಣ ವರ್ಜಿತಂ । ನಹೋಮೋನಬಲಿಸ್ತೀರ್ಥಂ ಸ್ವಾತಂತ್ರ್ಯವಿಧಿರೀದೃಶಃ । ಪಾರತಂತ್ರ್ಯೇತು ಭಕ್ತಾನಾಮುತ್ಸವಃ ಕಮಲಾಸನ । ಇತ್ಯಾದಿ ಪಾದ್ಮೇಶ್ವರಾದ್ಯನೇಕ ಸಂಹಿತಾವಚನಗಳು ಭಗವದ್ಭಕ್ತರಾದ ಆಚಾರ್ಯರನ್ನು ಪ್ರತಿಷ್ಠೆಮಾಡುವದಕ್ಕೆ ಪ್ರಮಾಣಗಳಾಗಿರುವವು.

(೮) ಕೃತತ್ರೇತಾ ದ್ವಾಪರಯುಗಾದಿಗಳಲ್ಲಿ ಲೋಕೋಜ್ಜೀವನಾರ್ಥವಾಗಿ ಅವತರಿಸಿದ ಮಹಾನುಭಾವರಾದ ಭಗವದ್ಭಕ್ತಾಗ್ರಗಣ್ಯರಾದ ಪುರಾಣಾದಿ ಪ್ರಸಿದ್ಧರಾದ ಆಳ್ವಾರಾಚಾರ್ಯರಗಳಿಗೆ ಪ್ರಕೃತ ಆಕ್ಷೇಪಿಸುವರಲ್ಲಿಯೂ ಇವರು ಗುರುಗಳೆಂದು ಭಾವಿಸಿರುವರಲ್ಲಿಯೂ ಎಷ್ಟುಮಟ್ಟಿಗೆ ಬ್ರಾಹ್ಮಣ್ಯವಿರುವದೋ ತತೋಪ್ಯಧಿಕವಾಗಿಯೇ ಬ್ರಾಹ್ಮಣ್ಯವಿರುವದೆಂದು ಇವರು ದೃಢವಾಗಿ ತಿಳಿಯಬೇಕು. ರಾಮಾದಿಗಳು ಕ್ಷತ್ರಿಯಾದಿ ಕುಲದಲ್ಲಿ ಅವತರಿಸಿದ

ಕಾಲದಲ್ಲಿ ಅವರು ಬ್ರಾಹ್ಮಣರಿಗೆ ವಂದನವೇ ಮೊದಲಾದದ್ದನ್ನು ನಡಿಸುತ್ತಿದ್ದರೂ ನಿರ್ಯಾಣಾನಂತರ ರಾಮಾನುಜರಿಗಳಿಗೆ ಸರ್ವರೂ ನಮಸ್ಕಾರಪೂಜಾದಿಗಳನ್ನು ನಡಿಸುವರಷ್ಟೆ ಹಾಗೆಯೇ ಸರ್ವಪೂಜ್ಯರಾದ ಮುಕ್ತಾವಸ್ಥೆಯಲ್ಲಿರುವ ಆಳ್ವಾರಾಚಾರ್ಯರುಗಳಿಗೆ ಶಾಸ್ತ್ರಜ್ಞರು ಯಾರುತಾನೆ ಅಪಮಾನ ಮಾಡುವದಕ್ಕೆ ಉದ್ಯೋಗಿಸುವರು "ಆಳ್ವಾರಾಚಾರ್ಯರುಗಳಿಗಿಂತಲೂ ಈ ಶ್ರಿಂಗೇರೀಸ್ವಾಮಿಗಳವರು" ಎಂದು ಬರದಿರುವ ಇವರು ಶ್ರೀ ಶಕಂರಾಚಾರ್ಯರುಗಳಿಗಿಂತಲೂ ಹೆಚ್ಚಾದ ಜಗದ್ಗುರುತ್ವವನ್ನು ಎಂದುನ್ನೂ ಬರಿಯುವದಕ್ಕೆ ಯಾಕೆ ಲಜ್ಜೆಪಟ್ಟರೋ ? ಈರೀತಿ ಆಚಾರ್ಯ ನಿಂದೆಯನ್ನು ಮಾಡಿರುವದನ್ನು ನೋಡಿ ಆಗ್ರಹಗೊಂಡವರು ಅನೇಕರು ಈವಿಷಯದಲ್ಲಿ ಅಧಿಕವಾಗಿ ಬರಿಯಬೇಕೆಂದು ಅಭಿಪ್ರಾಯಪಟ್ಟರು ಆದರೆ ಯಾರೋ ಒಬ್ಬರು ಅಜ್ಞಾನದಿಂದ ಬರದ್ದಕ್ಕೆ ನಾವು ಅವರೆಲ್ಲರನ್ನು ಅವರಗುರುಗಳನ್ನು ಸಹ ದೂಷಿಸಿಬರಿಯುವದು ಅನುಚಿತವೆಂದು ಉಪೇಕ್ಷಿಸಿರುವೆವು. ಮೂಲಶಂಕರಾಚಾರ್ಯರವರು ಆಯಾಯಸ್ಥಲದಲ್ಲಿ ದೇವರಿಗೆ ನಮಸ್ಕಾರಮಾಡಿಬನಂತರ ಅಲ್ಲಿನ ಅರ್ಚಕರಿಗೂ ನಮಸ್ಕಾರಮಾಡಿದರೆಂದು ಶಂಕರವಿಜಯದಲ್ಲಿಯೇ ಇರುವದು ಹೀಗೆ ಮೂಲಶಂಕರಾಚಾರ್ಯರಿಗೂಕೂಡ ವಂದನೀಯರಾದ ಅರ್ಚಕರಿಂದ ನಿತ್ಯವೂ ಪೂಜಿಸಲ್ಪಡುತ್ತಲಿರುವ ಆಳ್ವಾರಾಚಾರ್ಯರುಗಳಿಗೆ ಈ ಶೃಂಗೇರೀಸ್ವಾಮಿಗಳವರು ಮರ್ಯಾದೇಮಾಡತಕ್ಕ ಪ್ರಕೃತವಿಲ್ಲವೆಂದು ಇವರುಹೇಳುವಮಾತನ್ನು ಶ್ರೀ ಶೃಂಗೇರೀಸ್ವಾಮಿಗಳವರೇ ಒಪ್ಪಲಾರರು.

ಅನಂತರ [ "ಈ ಶ್ರಿವೈಷ್ಣವರಲ್ಲೀ ಎರಡುಗುಂಪಾಗಿರುವದ್ದರಿಂದ ಒಂದುಗುಂಪಿನವರು ವೇದಾಂತಾಚಾರ್ಯರು ಮೊದಲಾದ ಆಳ್ವಾರ್ರುಗಳಿಗೆ ಕೈಮುಗಿಯುವದಿಲ್ಲವು ಇನ್ನು ಕೆಲವರು ನಮ್ಮಾಳ್ವಾರ್ರು ಪಿಳ್ಳಲೋಕಾಚಾರ್ಯರು ಮೊದಲಾದವರಿಗೆ ಕೈಮುಗಿಯುವದಿಲ್ಲವು ಇವರಲ್ಲಿಯೇ ಹೀಗಿರುವಲ್ಲಿ ಶ್ರೀಜಗದ್ಗುರುಗಳವರು ಈ ಆಳ್ವಾರುಗಳಿಗೆ ಮರ್ಯಾದೆ ಮಾಡಲಿಲ್ಲವೆಂದು ಯಾತಕ್ಕೆ

ದುಃಖಪಡಬೇಕೋ ಶ್ರೀ ರಂಗನಾಥನಿಗೇ ತಿಳಿಯಬೇಕು"] ಎಂದು ಸಂಪ್ರದಾಯಗಳನ್ನರಿಯದೆ ಬರೆದಿರುವರು. ವೈಷ್ಣವರಲ್ಲಿ ಎಲ್ಲಾ ಗುಂಪಿನವರೂ ಭಗವದ್ಭಕ್ತರನ್ನೆಲ್ಲಾ ಭಗವಂತನಲ್ಲಿ ಹ್ಯಾಗೋ ಹಾಗೆ ಗೌರವವನ್ನು ಮಾಡುವವರಾಗಿರುತ್ತಾರೆಯೇ ಹೊರ್ತು ಯಾವ ಆಚಾರ್ಯರಿಗೂ ಅಪಮಾನಪಡಿಸುವದಕ್ಕೆ ಉದ್ಯೋಗಿಸತಕ್ಕವರಲ್ಲ ಖ್ಯಾತಿವಂತರಾದ ಶ್ರೀ ಶೃಂಗೇರೀ ಸ್ವಾಮಿಗಳವರು ಶಾಸ್ತ್ರಸಂಪ್ರದಾಯ ವಿರುದ್ಧಗಳಾದ ಕಾರ್ಯಗಳನ್ನು ಮಾಡಿದರೆಂದು ಸಕಲರೂ ಹೇಳುತ್ತಿರುವದಕ್ಕಾಗಿ ನಾವು ವ್ಯಸನಪಡುವೆವೇ ಹೊರ್ತು ಬೇರೆ ಯಾವದಕ್ಕೂ ನಮಗೆ ವ್ಯಸನವಿಲ್ಲವು

ಅನಂತರ [ "ಇದೆಲ್ಲಾ ಹೀಗಿರಲಿ ಈ ಆಳ್ವಾರ್ ಪ್ರತಿಮೆಗಳಿಗಿಂತಲೂ ಚಿತ್ರದಲ್ಲಿ ಬರಿಯಲ್ಪಟ್ಟ ಶ್ರೀ ಭಗವಂತನ ಲೀಲಾವತಾರ ಪ್ರತಿಮೆಗಳು ಶ್ರೇಷ್ಠವಲ್ಲವೆ ಅಂಥಾ ಭಗವಂತನ ಪ್ರತಿಮೆಗಳನ್ನು ಬರೆದಿರುವ ಅನೇಕ ಪಟಗಳ ಮುಂದೆ ಈ ಪ್ರೊಸಿಡಿಂಗ್ಸ್ ಮಾಡಿರುವ ಶ್ರೀವೈಷ್ಣವ ಮಹನೀಯರು ಅನೇಕ ಸ್ವಾಮಿಗಳವರೂ ಸಹ ಕೆಲವರು ಜೋಡುಗಳನ್ನು ಹಾಕಿಕೊಂಡು ಸಂಚರಿಸುವ ಕಾಲದಲ್ಲಿ ಕೆಲವರು ಪಾದುಕೆಗಳನ್ನು ಧರಿಸಿಕೊಂಡು ಸಂಚರಿಸುವ ಕಾಲದಲ್ಲೂ ಇವರು ಬರೆದಿರುವ ಶ್ಲೋಕವನ್ನೂ ಇವರು ಮಾಡಿರುವ ಆಕ್ಷೇಪವನ್ನೂ ಇವರೆ ಜ್ಞಾಪಕದಲ್ಲಿ ಇಟ್ಟು ಇರಬೇಕೆಂದು ಪ್ರಾರ್ಥಿಸುತ್ತೇನೆ"] ಎಂದು ಬರೆದಿರುವರು. ಶ್ರೇಷ್ಠತ್ವವೆಂಬುವದು ಶಾಸ್ತ್ರೈಕ ಸಮಧಿಗಮ್ಯವೇ ಹೊರತು ಬೇರೆ ಅಲ್ಲ. ಯಾವದಾದರೂ ಶ್ರೇಷ್ಠವಾಗಿರಲಿ, ಆ ವಿಚಾರದಿಂದೇನು ಫಲ? "ಯಾನೈರ್ವಾ ಪಾದುಕಾಭಿರ್ವಾ ಗಮನಂ ಭಗವದ್ಗೃಹೆ" ಇತ್ಯಾದಿ ಪಂಚರಾತ್ರ ರಕ್ಷಾ ನಿರ್ಣಯಸಿಂಧುಟೀಕೋಪಾಹೃತ ವಚನಗಳಿಂದ ದೇವಾಲಯದಲ್ಲಿ ವಾಹನದಿಂದಲೂ ಪಾದುಕೆಗಳನ್ನು ಧರಿಸಿಯೂ ಸಂಚರಿಸಕೂಡದೆಂದು ಸಿದ್ಧವಾಗುವದೇ ಹೊರತು ಇತರ ಸ್ಥಲದಲ್ಲಿ ಸಂಚರಿಸಕೂಡದೆಂದು ಸಿದ್ಧ

ಸುವದಿಲ್ಲವು. ವಿಧಿನಿಷೇಧಗಳಿಗೆ ಶಾಸ್ತ್ರವೇ ಪ್ರಮಾಣವು. ಆದ್ದರಿಂದ ದೇವಾಲಯಕ್ಕೆ ಸೇರದೆ ಇರತಕ್ಕ ಸ್ಥಳಗಳಲ್ಲಿ ಪಾದುಕಾದಿಗಳನ್ನು ಧರಿಸಿ ಸಂಚರಿಸುವದಕ್ಕೆ ಯಾವ ಶಾಸ್ತ್ರಬಾಧೆಯೂ ಇರುವದಿಲ್ಲ ಆದ್ದರಿಂದ ಶಾಸ್ತ್ರಮಾರ್ಗವನ್ನುಲ್ಲಂಘಿಸಿ ಇತರರನ್ನು ಆಕ್ಷೇಪಿಸುವವರಿಂದ ನಾಸ್ತಿಕತ್ವಮಾತ್ರವೇ ಇವರಲ್ಲಿ ಪ್ರಕಾಶಪಡುವದೇಹೊರತು ಇವರು ಮಾಡಿದ್ದು ಸಾಧುವೆಂದಾಗಲಾರದು

ಈ ರೀತಿಯಾಗಿ ದೇವಸ್ಥಾನದಲ್ಲಿ ವಾಹನದಿಂದಲೂ ಪಾದುಕೆಗಳನ್ನು ದರಿಸಿಯೂ ಸಂಚರಿಸಕೂಡದೆಂದು ಶಾಸ್ತ್ರವನ್ನು ನಾವು ಉದಾಹರಿಸಿರುವದರಿಂದಲೂ ಅಂಥಾ ವಚನಗಳನ್ನು ನಿರ್ಣಯಸಿಂಧು ಟೀಕಾಕಾರರಾದ ಸ್ಮಾರ್ತರು ಉದಾಹರಿಸಿರುವದರಿಂದಲೂ. ನಮಗೆ ಎರಡನೆಯ ಉದ್ದೇಶ್ಯವೆಂದು ಇವರು ಬರೆದಿರುವದು ಸಿದ್ಧಿಸುವದಕ್ಕೆ ಯಾವ ಆತಂಕವೂ ಇಲ್ಲ.

ಮೇಲುಕೋಟೆ ಕೇಶವಭಟ್ಟರು ಬರೆದುಕೊಟ್ಟ ವಚನಗಳೆಂದು ಬರೆದಿರುವ ವಚನಗಳಲ್ಲಿ— ಅನಂಗೀಕೃತ್ಯವೈ ದೀಕ್ಷಾ ಮಾಚಾರ್ಯಾಚ್ಛಾಸ್ತ್ರಚೋದಿತಾಂ ॥ ಯಃಪೂಜಯತಿ ದೇವೇಶಂ ತದಾ ರಾಷ್ಟ್ರಕ್ಷಯೋಭವೇತ್ ॥-ಎಂದು ಅದೀಕ್ಷಿತರು ಪೂಜೆ ಮಾಡಕೂಡದೆಂದು ಇರುತ್ತೆ. ಮತ್ತು " ಆಲಯೇ ಪಂಚರಾತ್ರೇಣ ಸ್ಥಾಪಿತಂ ಪೂಜಿತಂ ಪುರಾ ॥ ಅನ್ಯಮಾರ್ಗೇಣವೈ ವತ್ಸ ಆಪನ್ಯಪಿ ನಪೂಜಯೇತ್ ॥"—ಎಂದು ಪಂಚರಾತ್ರಾತಿರಿಕ್ತವಾದ ಯಾವ ಮಾರ್ಗದಿಂದಲೂ ಪಂಚರಾತ್ರಸ್ಥಲದಲ್ಲಿ ಪೂಜಿಸಕೂಡದೆಂದಿರುತ್ತೆ. ಆದ್ದರಿಂದ ಇವರು ಆ ವಚನಗಳನ್ನೆಲ್ಲಾ ತಂತ್ರಸಾಂಕರ್ಯಪರವೆಂದುಹೇಳಿರುವದು ಅಸಂಗತವು. ಈ ರಂಗನಾಥದೇವರು ಆಗಮೋಕ್ತರೀತಿಯಿಂದಲೇ ಪ್ರತಿಷ್ಠಿತರೆಂಬ ಅಂಶವನ್ನು ಪೂರ್ವದಲ್ಲಿಯೇ ಸಪ್ರಮಾಣವಾಗಿ ಸ್ಥಾಪಿಸಿರುವೆವು

ಮತ್ತು—ಆ ವಚನಗಳಲ್ಲಿ „ ವೈಖಾನಸಸಹಿತಾರ್ಥಾಯ ಭೃಗುಣಾ ತಂತ್ರ ವಿಸ್ತರಿತಂ ॥ ವೈಖಾನಸಾದ್ಯಂ ಯತ್ತಂತ್ರಂ ತಥಾ ಬ್ರಾಹ್ಮಣ ಸೇವಿತಂ ॥ ಯಾಮುಳಂಕೊಟ್ಟವೀತಂತ್ರಮನುಲೋಮೈರನುಷ್ಠಿತಂ ॥ ಅನ್ಯೋನ್ಯಂ ತಂತ್ರ ಸಾಂಕರ್ಯಂ ನಕುರ್ಯಾತ್ತು ಕಥಂಚನ ॥ '' ಎಂದು ಮೂಲಕೋಶಗಳಲ್ಲಿ ಪಾಠವಿರುವದು. ಅದೇ ರೀತಿಯಾಗಿ ಕೇಶವಭಟ್ಟ ರುನ್ನು ಬರೆದಿರುತ್ತಾರೆ. ಬ್ರಾಹ್ಮಣಾಧಿಕಾರಿಕವಾದ ಕೆಲವು ಉತ್ಕೃಷ್ಟ ತಂತ್ರಗಳಿರುವವು. ಅನುಲೋಮಮಾತ್ರಾಧಿಕಾರಿಕವಾದ ಕೆಲವು ನಿಕೃಷ್ಟ ತಂತ್ರಗಳಿರುವವು. ಅವುಗಳಲ್ಲಿ ಯಾವದಕ್ಕೂ ಪರಸ್ಪರ ಸಾಂ ಕರ್ಯ ಕೂಡದೆಂದು ಅದರರ್ಥವು ಹೀಗಿರುವಲ್ಲಿ ' ತದಬ್ರಾಹ್ಮಣಸೇವಿತಂ ' ಪ್ರತಿಲೋಮೈರನುಷ್ಠಿತಂ ಎಂದು ಸ್ವೇಚ್ಛೆಯಾಗಿ ಪಾಠವನ್ನು ಕಲ್ಪಿಸಿ ಅಧಿ ಕಪ್ರಸಂಗವನ್ನು ಮಾಡಿರುವವರ ಧೈರ್ಯಕ್ಕೆ ಆಶ್ಚರ್ಯಪಡಬೇಕಾಗಿರುವದು. ಪ್ರಶಸ್ತ ತಂತ್ರಗಳಿಗೂ ಸಾಂಕರ್ಯ ಕೂಡದೆಂದಿರುವದರಿಂದ ತಂತ್ರಗಳಿಗೆ ನಿಕೃಷ್ಟತ್ವ ಹೇಳಬೇಕೆಂಬ ಆವಶ್ಯಕತೆಯೂ ಇಲ್ಲ. ಬ್ರಾಹ್ಮಣಸೇವಿತತ್ವ ವಿಶೇ ಷಣವು ಉತ್ಕೃಷ್ಟತ್ವ ಪ್ರದರ್ಶಕವು. ಅನುಲೋಮಾನುಷ್ಠಿತತ್ವ ವಿಶೇಷ ಣವು ನಿಕೃಷ್ಟತ್ವ ಸೂಚಕವು. ಉತ್ಕೃಷ್ಟ ನಿಕೃಷ್ಟ ತಂತ್ರಗಳಿಗೂ ಪರಸ್ಪರ ಸಂಕರಕೂಡದೆಂಬುವದೇ ಈ ವಿಶೇಷಣಗಳಿಗೆ ಪ್ರಯೋಜನವು. ಆದ್ದರಿಂದ ಇವರು ಬರೆದಿರುವ ಆಕ್ಷೇಪಕ್ಕೆ ಯಾವದಕ್ಕೂ ಅವಕಾಶವಿಲ್ಲ.

ಅನಂತರ—[ " (೩) ಉದ್ದ್ಯೇವು ಶ್ರೀಸ್ವಾಮಿಗಳವರು ಶಠಾರಿಗೆ ಪ್ರತ್ಯುತ್ಥಾನಾದಿಗಳನ್ನು ಮಾಡದೇಇರುವದು ಅಸಂಗತವೆಂದು ಸ್ಥಿರಪಡಿಸತ ಕ್ಕದ್ದು ಇದಕ್ಕೆತಕ್ಕ ಪ್ರಮಾಣಗಳನ್ನು ಬರೆಯಲ್ಪಡಲಿಲ್ಲವು. ಈಪ್ರಕಾರ ಶಠಾರಿ ಎಂಬುವದನ್ನುಮಾಡಿ ಇಟ್ಟುಕೊಂಡಿರಬೇಕೆಂದು ಆಗಮಗಳಲ್ಲೇ ಆ ಗಲೀ ಪುರಾಣಗಳಲ್ಲೇ ಆಗಲೀ ಎಲ್ಲೂ ಹೇಳಿರುವದಿಲ್ಲ. ಈ ಶಠಾರಿಎಂಬು ವದು ಉತ್ಸವವಿಗ್ರಹಾದಿಗಳಂತೆ ಪೂಜಿಸಲ್ಪಡುವದಿಲ್ಲವು. ಇದಕ್ಕೆ ಧೂಪ

ಬೇಪ ನೈವೇದ್ಯಾದಿಗಳೂ ಇಲ್ಲವು ಇದು ದೇವರಿಗೆ ಧರಿಸತಕ್ಕದ್ದೂ ಅಲ್ಲವು. ಇದು ಒಂದು ಮತಸಂಬಂಧವಾದ ಸಂಕೇತದಿಂದ ಮಾಡಿಕೊಳ್ಳುವ ಮರ್ಯಾದಾರೂಪವಾಗಿದೆ. ಇದಕ್ಕೆ ಪ್ರತ್ಯುತ್ಥಾನಾಭಿವಾದನಮಾಡದೆ ಇರು ವದು ಅಸಂಗತವೆಂದು ಹೇಳಿರುವದು ಅಸಂಗತವಾಗಿದೆ " ] ಎಂದು ಸಕಲಾಗ ಮಪುರಾಣಾದಿಗಳನ್ನು ಪರಿಶೀಲನೆಮಾಡಿದಹಾಗೆ ಅಭಿನಯಸಿ ಬರದಿರುವರು ಭಕ್ತಿಯಿಂದ ದೇವಸ್ಥಾನಕ್ಕೆಹೋಗಿ ದೇವರದರ್ಶನವನ್ನು ಮಾಡುವ ಆಸ್ತಿ ಕರಿಗೆಲ್ಲಾ ಶಠಾರಿಯು ಭಗವದ್ಬಿಂಬ ಸಮಾನವಾಗಿಯೇ ಗೌರವಾರ್ಹ ವೆಂಬ ಅಂಶವು ವಿದಿತವಾಗಿರುವದರಿಂದ ಅತಿಪ್ರಸಿದ್ಧವಾದ ವಿಷಯಕ್ಕೆ ವಚನ ವನ್ನು ಬರೆಯಬೇಕಾದ ಅವಶ್ಯಕತೆ ಇಲ್ಲವೆಂದು ನಾವು ಬರಿಯಲಿಲ್ಲ. ದೇವ ಸ್ಥಾನದಮುಖವನ್ನು ನೋಡದೇ ಶಾಸ್ತ್ರಗ್ರಂಥವನ್ನರಿಯದೆ ಆಕ್ಷೇಪಿಸಿರುವ ವರಿಗಾಗಿ ಪ್ರಕೃತದಲ್ಲಿ ವಚನಗಳನ್ನು ಬರೆಯುವೆವು ನಲಕೂಬರಸಂ ಹಿತಾಯಾಂ—

ಸಕಲಂನಿಷ್ಕಲಂಚೇತಿ ದ್ವಿವಿಧಂ ಪರಿಕೀರ್ತಿತಂ |
ಸಕಲಂಬಿಂಬಮಿತ್ಯುಕ್ತಂ ನಿಷ್ಕಲಂಪಾದುಕಾಭವೇತ್ |
ನಿಷ್ಕಲತ್ವಾದ್ವಿಶೇಷೇಣಸ್ಪರ್ಶದೋಷೋನವಿದ್ಯತೆ |
ಚತುರ್ವರ್ಣೈಶ್ಚಶಿರ ಸಾಧಾರ್ಯಂ ಭಕ್ತಿಸಮನ್ವಿತೈಃ |
ಅಪಿವೇದಾಂತವಿದ್ವಿಪ್ರೈರ್ನಕರಗ್ರಾಹ್ಯಮೇವಹಿ |
ಚಂಡಾಲಾದ್ಯೈಸ್ತುರುಷ್ಕಾದ್ಯೈರ್ನಧಾರ್ಯಂ ಶಿರಸಾಪಿತತ್ |
ಕರೇಣಯದಿ ಸಂಸ್ಪೃಷ್ಟಾ ಪಾದುಕಾಚದ್ವಿಜಾತಿಭಿಃ |
ನಿಷ್ಕೃತಿಸ್ತತ್ರಕರ್ತವ್ಯಾಬಿಂಬಸ್ಪರ್ಶ ವಿಧಿರ್ಯಥಾ | ಇತಿ

ಹೀಗೆ ಶಠಾರಿಎಂಬ ಭಗವತ್ಪಾದುಕೆಯು ಭಗವದ್ಬಿಂಬ ತುಲ್ಯವಾದದ್ದೆಂದು ಶಾಸ್ತ್ರವಿರುವಲ್ಲಿ ಅಂಥಾಶಠಾರಿಯನ್ನು ಭಕ್ತರಾದವರ ಸಮೀಪಕ್ಕೆ ಬಡರಾ ಡಿಸಿಕೊಂಡುಬಂದರೆ ಪ್ರತ್ಯುತ್ಥಾನಾಭಿವಂದನಾದಿಗಳನ್ನು ನಡಿಸದೇಇರು

ವುನು ಯುಕ್ತವಾಗುವದೊ ಶಾಸ್ತ್ರಜ್ಞರು ಯೋಚಿಸಬೇಕು. " ನಾರಾಯಣ ಕರುಣಾಕರ ಶರಣಂಕರವಾಣಿ ತಾವಕೌಚರಣೌ | ಇತಿಷಟ್ಪದೀ ಮದೀಯ ಹೃದಯಸರೋಜೆಸದಾವಸತು " ಎಂದಲ್ಲವೇ ಶ್ರೀ ಶಂಕರಾಚಾರ್ಯರು ಅಂತ್ಯದಲ್ಲಿ ಅನುಸಂಧಾನಮಾಡಿರುವರು ಆದ್ದರಿಂದಲೇ [ " ತಮಗೆ ಮರ್‍ಯಾದೆ ಸಂತುಎಂದು ಶ್ರೀಸ್ವಾಮಿಗಳವರು ಅಪ್ಪಣೆ ಕೊಡಿಸಿದ್ದ ಸುಕಾದ ಮರ್‍ಯಾದೆಯಾಗಿಧೆ. ಈ ಶ್ರೀವೈಷ್ಣವರಪೈಕಿ ಒಬ್ಬರು ಇತರಿವರ ಶೃಂಗೆರಿಸ್ವಾಮಿಗಳವರು ದಯಮಾಡಿಸಿದಾಗ್ಯೂ ಈ ಶರಾರಿಯನ್ನು ಇತರಮರ್‍ಯಾದೆಗಳನ್ನೂ ತೆಗದುಕೊಂಡು ಪದ್ಧತೀಪ್ರಕಾರ ಇಸ್ತಿಕಪಾಲ್ ಹೋಗತಕ್ಕ ಸ್ಥಲದವರಿಗೂಹೋಗಿ ಮರ್‍ಯಾದೆಮಾಡತಕ್ಕ ಪದ್ಧತಿಯನ್ನ ಮನ್ನಾಮಾಡಿಸಬೇಕೆಂದು ಮುಜರಾಯಿ ಸೂಪರಿಂಟೆಂಡೆಂಟರಿಗೆ ಬರಿಯಬೇಕೆಂದು ಅಪೇಕ್ಷಿಸುವದು ನೋಡಿದರೆ ಇವರೆ ದೇವಸ್ಥಾನವನ್ನ ಕಟ್ಟಿಸಿದವರಾದಾಗ್ಯೂ ಈಮೇರಿಗೆ ಹೇಳಲಾರರು ಇಂಥಾದ್ದರಲ್ಲಿ ಸರಕಾರದ ದೇವಸ್ಥಾನವಾಗಿರುವಲ್ಲಿಯೆ ಈರೀತಿ ಅಪೇಕ್ಷಿಸುವದು ನೋಡಿದರೆ ಬಹಳ ಆಶ್ಚರ್‍ಯಪಡಬೇಕಾಗಿಧೆ. " ] ಎಂದು ಬರದಿರುವದನ್ನು ಅಸಂಗತವೆಂದು ವಿವೇಕಿಗಳಾದವರು ಒಪ್ಪದೆ ಇರಲಾರರು. ಕಾವೇರೀ ಮೊದಲಾದನದಿಗಳು ಮತ್ತು ಅವುಗಳ ಕಾಲ್ವೆಗಳು ಸರ್ಕಾರಿಗಳಾದಾಗ್ಯೂ ಅವುಗಳನ್ನು ಯಾರುಯಾರು ಎಷ್ಟುಮಟ್ಟಿಗೆ ಸ್ವೋಪಯೋಗ ಮಾಡಿಕೊಳ್ಳಬೇಕೊ ಅಷ್ಟುಮಟ್ಟಿಗೆ ಅವರ ಉಪಯೋಗವನ್ನು ರಕ್ಷಿಸುವದು ಸರ್ಕಾರದವರಿಗೆ ಶೇರಿರುವದು ಮತ್ತು ಇತರರ ಉಪಯೋಗಕ್ಕೆ ಭಂಗವಾಗುವಂತೆ ಮತ್ತೊಬ್ಬರು ಉಪಯೋಗಿಸುವದಕ್ಕೆ ಉಪಕ್ರಮಿಸಿದ ಪಕ್ಷದಲ್ಲಿ ಅದಕ್ಕೆ ಪ್ರಜೆಗಳು ಸರ್ಕಾರದವರಲ್ಲಿ ತಿಳಿಸುವದು ಮತ್ತು ಇತರರ ಉಪಯೋಗಕ್ಕೆ ಭಂಗವಾಗದಂತೆ ಸರ್ಕಾರದವರು ಮಾಡತಕ್ಕದುನ್ನು ಜಗದ್ವಿದಿತವಾಗಿಯೇ ಇರುವದು. ಹಾಗೆಯೇ ದೇವಸ್ಥಾನವು ಸರ್ಕಾರಿಯಾದಾಗ್ಯೂ ಅಲ್ಲಿ ಯಾರಾದರೂ ಶಾಸ್ತ್ರಪದ್ಧತಿ ವಿರೋಧವನ್ನು ದೇವತಾ

ವಮಾನವನ್ನುಸಹ ನಡಿಸಿ ಇತರರಿಗೆ ಭಂಗಪಡಿಸಿದರೆ ಅಥವಾ ಅದಕ್ಕೆ ಉದ್ಯೋಗಿಸಿದರೆ ಆವಿಷಯುವನ್ನು ನಿರೋಧಿಸುವದಕ್ಕಾಗಿ ಸರ್ಕಾರದಲ್ಲಿ ತಿಳಿಸುವದು ಪ್ರಜೆಗಳಿಗೆ ನ್ಯಾಯುವಾಗಿಯೇ ಇರುವದು ಇವರಕೋರಿಕೆಯಂತೆ ಪ್ರಜೆಗಳನ್ನು ರಕ್ಷಿಸತಕ್ಕದ್ದು ಸರ್ಕಾರದವರಿಗೂ ಅನುಷ್ಠೇಯುವೇ ಆಗಿರುತ್ತೆ ಎಂಬುತಿಳಿಯುವದು.

ಶ್ರೀ ಶೃಂಗೇರಿಸ್ವಾಮಿಗಳವರು ವಿಷ್ಣುಲಾಂಛನವಂ ಧರಿಸಿ ವೈಷ್ಣವ ದೀಕ್ಷೆಯಂ ಕೈಕೊಂಡವರಲ್ಲವಾದ್ದರಿಂದ ಪಂಚರಾತ್ರಸ್ಥಲದಲ್ಲಿ ಅವರು ಮಾಡಿದ ಗರ್ಭಗೃಹಪ್ರವೇಶ ಮತ್ತು ಪೂಜೆ ಇವುಗಳು ಶಾಸ್ತ್ರವಿರುದ್ಧಗಳೆಂದು ಶ್ರೀ ವಿದ್ವಾನ್ ಶ್ರೀರಂಗರಾಜಪುರದ ರಂಗಸ್ವಾಮಿಗಳು ಹೇಳಿಬ ಅಂಶವನ್ನು ಓಸೇ ಉದ್ದೇಶ್ಯವು ಎಂದು ಅನುವಾದನಾಡಿ ಅಸಂಬದ್ಧವಾಗಿ ಆಕ್ಷೇಪಗಳನ್ನು ಬರೆದಿರುವರು. ಅವುಗಳಲ್ಲಿ ಪ್ರಕೃತೋಪಯೋಗಿಯಾದ ಅಂಶಗಳಿಗೆ ಮಾತ್ರ ಸಮಾಧಾನಗಳನ್ನು ಇಲ್ಲಿ ಹೇಳುವೆವು. ಹ್ಯಾಗಂದರೆ—

[" ವಿಷ್ಣುಲಾಂಛನವಂ ಧರಿಸಿರತಕ್ಕವರಲ್ಲವೆಂದು ಯಾವ ಅಭಿಪ್ರಾಯದಿಂದ ಹೇಳಿ ಇಧಾರೋ ಅದು ನಿಜವಾದರೂ ಇವರಿಗೆ ಪ್ರಯೋಜನವಿಲ್ಲವು. "] ಎಂದು ಬರೆದಿರುವರು. ಇದನ್ನು ವಿಚಾರಿಸೋಣ

[ಪರಾಶರಸ್ಮೃತೌ ಉತ್ತರಭಾಗೆ *

ವಿಧಿನಾ ಶಂಖಚಕ್ರಾದಿ ಧಾರಣಂಚೋರ್ಧ್ವಪುಂಡ್ರಕಂ ।
ಉಪವೀತಂಶಿಖಾಬಂಧೊ ವಿಪ್ರಸ್ಯ ಸತತಂ ಸ್ಮೃತಂ ॥
ಚಕ್ರಲಾಂಛನಹೀನಸ್ಯ ದ್ವಿಜತ್ವಂ ನಿಷ್ಫಲಂಭವೇತ್ ।

ಪಾದ್ಮಪುರಾಣೆ ¶

ವಿಧಿನಾ ವೈಷ್ಣವಂಚಕ್ರಂ ಧಾರ್ಯಂಹಿ ಶ್ರುತಿಚೋದನಾತ್ ।

---

* ಕಲಿಕತ್ತಾ ಜೀವಾನಂದ ವಿದ್ಯಾಸಾಗರ ಮುದ್ರಿತ ಪುಸ್ತಕವನ್ನ ನೋಡುವದು.
¶ ಪೂನಾ ಆನಂದಾಶ್ರಮ ಮುದ್ರಿತ ಪುಸ್ತುಕವನ್ನುನೋಡಿ.

ದಕ್ಷಿಣೇತುಭುಜೇವಿಪ್ರೋ ಬಿಭೃಯಾದ್ವೈ ಸುದರ್ಶನಂ ॥
ಸವ್ಯೇತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋವಿದುಃ ।
ಏವಂ ಮಹೋಪನಿಷದಿ ಪ್ರೋಕ್ತಂ ಚಕ್ರಾದಿಧಾರಣಂ ॥
ತಥೈವಸಾಮ್ನಿಯಜುಷಿ ಋಚಿಪ್ರೋಕ್ತಂ ಶುಭಾನನೇ ।
ವ್ರತೇವಿಷ್ಣೋ ಅಬ್ಜಚಕ್ರೇ ಪವಿತ್ರೇ ಜನ್ಮಾಂಭೋಧಿಂ ತರ್ತವೇ ಚರ್ಷಣೀಂದ್ರಾಃ ॥

ಇತ್ಯಾದಿ ಪ್ರಮಾಣಗಳಿಂದ ಶಂಖಚಕ್ರಾದಿ ಧಾರಣವೇ ವಿಷ್ಣು ಲಾಂಛನವೆಂದು ಸಿದ್ಧವಾಗಿರುವದು ಈ ವಿಷಯದಲ್ಲಿ ಶ್ರುತಿಸ್ಮೃತ್ಯಾದಿ ಪ್ರಮಾಣಸಹಸ್ರಗಳು ಇದ್ದರೂ ಗ್ರಂಥವಿಸ್ತಾರವಾಗುವ ಕಾರಣ ಸಂಗ್ರಹಮಾಡಿರುತ್ತೆ. ಈ ವಿಷ್ಣುಲಾಂಛನವನ್ನು ಧರಿಸತಕ್ಕಂಥಾವರೇ ಪಂಚರಾತ್ರೋಕ್ತ ದೀಕ್ಷಾಯುಕ್ತರಾಗಿರುವರು. ಪಂಚರಾತ್ರೋಕ್ತದೀಕ್ಷೆಯು ಪಂಚಸಂಸ್ಕಾರದೀಕ್ಷೆ ಚಕ್ರಾಬ್ಜಮಂಡಲದೀಕ್ಷೆಎಂದು ಎರಡು ವಿಧವೆಂಥುನ್ನು ಅವುಗಳೆರಡರಲ್ಲಿ ಯಾವದೊಂದು ದೀಕ್ಷೆಯೂ ಇಲ್ಲದವರು ಗರ್ಭಗೃಹಪ್ರವೇಶವನ್ನೂ ಪೂಜೆಯನ್ನೂ ಮಾಡುವದು ಪಂಚರಾತ್ರ ಶಾಸ್ತ್ರವಿರುದ್ಧವೆಂದುನ್ನು ಪೂರ್ವದಲ್ಲಿಯೇ ಪ್ರಮಾಣಾದ್ಯುಪನ್ಯಾಸ ಪೂರ್ವಕವಾಗಿ ನಿರೂಪಿಸಿರುವೆವು. ಆದ್ದರಿಂದ ವಿಷ್ಣುಲಾಂಛನವನ್ನು ಧರಿಸದೆ ವಿಷ್ಣುದೀಕ್ಷೆಯನ್ನು ಸ್ವೀಕರಿಸದೆ ಇರುವಂಥಾವರು ಗರ್ಭಗೃಹಪ್ರವೇಶಾದಿಗಳಿಗೆ ಅನರ್ಹರೆಂದು ಪ್ರಮಾಣಾನುಸಾರವಾಗಿ ನಾವು ಹೇಳಿದರೆ ಅದನ್ನು ಪ್ರಕೃತೋಪಯುಕ್ತವಲ್ಲವೆಂದು ಇವರುಹೇಳುವದು ಶುದ್ಧ ಅಸಂಗತವು. ಹೀಗೆ ಇರುವದರಿಂದಲೇ

[ "ಪ್ರಕೃತಇವರು ಅಭಿಪ್ರಾಯಪಡುವ ವಿಷ್ಣುಲಾಂಛನ ಧರಿಸ ತಕ್ಕವಿಷಯದಲ್ಲಿ ಇರತಕ್ಕ ಬಾಧಕ ವಚನಗಳನ್ನ ಬರದರೆ ತುಂಬಾ ಇವರು ಖೇದಪಡಬೇಕಾಗಿಬರುತ್ತೆ ಆದ್ದರಿಂದ ಅದರನ್ನ ಪ್ರಕೃತದಲ್ಲಿ

ಬರೆಯದೆ ಬಿಟ್ಟು ಇರುವದಲ್ಲದೆ ವಿಷ್ಣುಲಾಂಛನವನ್ನು ಧರಿಸದೇ ಇರತಕ್ಕ
ವರು ಈ ದೇವರನ್ನು ಪೂಜಿಮಾಡಬಾರದೆಂದು ಇವರು ಉಪಹರಿಸಿರುವ
ಇಷ್ಟುವಚನಗಳಲ್ಲಿಯೂ ಇರುವದಿಲ್ಲ ಪ್ರ "] ಎಂದು ಬರೆದಿರುವದು ಅಸಂ
ಗತವಾಗಿರುವದೆಂದು ತಿಳಿಯುವದು. ಶಂಖಚಕ್ರಾದಿ ವಿಷ್ಣುಲಾಂಛನ
ಧಾರಣವೇ ಪಂಚಸಂಸ್ಕಾರ ದೀಕ್ಷಾರೂಪವಾದ್ದರಿಂದ ತಾದೃಶ ದೀಕ್ಷಾ
ರಹಿತರು ಗರ್ಭಗೃಹದ ಪ್ರವೇಶ ಪೂಜಾದಿಗಳನ್ನು ಮಾಡಕೂಡದೆಂಬ
ವಿಷಯವು ನಾವು ಉದಾಹರಿಸಿರುವ ಅನೇಕಪ್ರಮಾಣ ವಚನಗಳಲ್ಲಿ
ರುವಲ್ಲಿ ಅದು ಇಲ್ಲವೆಂದು ಅಪಲಾಪಮಾಡುವದು ಅಸಾಧುವು ವಿಷ್ಣು
ಲಾಂಛನ ಧಾರಣಾ ವಿಷಯದಲ್ಲಿ ಇವರು ಬರಿಯ ಬಹುದಾದ ಬಾಧಕ
ವಚನಗಳನ್ನು ತಾದೃಶಬಾಧಕ ಪರಿಹಾರಕವಾಗಿಯೂ ಸಾಧಕವಾಗಿಯೂ
ಇರುವಂಥಾ ನಿರ್ಣಯ ಸಿಂಧ್ವಾದಿಗಳಲ್ಲಿ ನಿಷ್ಪಕ್ಷಪಾತಿಗಳಾದ ಸ್ಮಾ
ರ್ತರಿಂದಲೇ ಪ್ರಮಾಣತ್ವೇನ ಉದಾಹರಿಸಲ್ಪಟ್ಟಂಥಾ ಅನೇಕಶ್ರುತಿ
ಸ್ಮೃತಿ ವಚನಗಳನ್ನುಸಹ ನೋಡಿರುವನಮಿಗೆ ಇವರು ಭಾದಕ ವಚ
ನಗಳನ್ನು ಬರದಮಾತ್ರದಿಂದ ಖೇದಲೇಶವು ಉಂಟಾಗಲಾರದುಇವರು
ತಮ್ಮ ಸ್ಮಾರ್ತರ ಗ್ರಂಥಗಳನ್ನೇ ನೋಡದೇ ಅಸಂಗತವಾಗಿಯೂ ಅಶಾ
ಸ್ತ್ರೀಯವಾಗಿಯೂ ಆಕ್ಷೇಪಗಳನ್ನು ಬರೆದಿರುವದಕ್ಕಾಗಿ ಶಾಸ್ತ್ರಜ್ಞರಾ
ದವರೆಲ್ಲರಿಗೂ ಖೇದವುಂಟಾಗದೆ ಇರಲಾರದು.

ಅನಂತರ-[" ಈಶ್ರೀವೈಷ್ಣವರು ಹೇಳುವ ಲಾಂಛನವು ಮುಖ್ಯ
ವಾದ ವಿಷ್ಣುಲಾಂಛನವಲ್ಲ. ಪರಂತು ಶಾಸ್ತ್ರರೀತ್ಯಾ ಮುಖ್ಯವಾದ
ವಿಷ್ಣುಲಾಂಛನವೆಂದರೆ ಮುಂದೆ ಹೇಳುವ ನೇರೆ ಸನ್ಯಾಸವೇ ವಿಷ್ಣುಲಾ
ಛನವೆಂದುನ್ನು ಹೇಳಬಹುದು. ಅದರನ್ನ ಶ್ರೀಸ್ವಾಮಿಗಳವರು ಧರಿಸಿ
ಯೇ ಇಧಾರೆಎಂದನ್ನು ಹೇಳಬಹುದು. "] ಎಂದಿರುತ್ತೆ. ಪೂರ್ವೋದಾ
ಹೃತಪರಾಶರ ಪಾದ್ಮಾದಿ ವಚನಗಳಿಂದ ಶಂಖಚಕ್ರಾದಿ ಧಾರಣವೇ

ಮುಖ್ಯವಾಗಿ ಆವಶ್ಯಕವಾದ ವಿಷ್ಣುಲಾಂಛನವಾಗಿರುವದು. ಸನ್ಯಾಸಾಶ್ರಮವು ತ್ರೈವರ್ಣಿಕರಿಗೆ ಯಲ್ಲರಿಗೂ ಆವಶ್ಯಕವಾದದ್ದೆಂದು ಯಲ್ಲಿಯೂ ಹೇಳಲ್ಪಡಲಿಲ್ಲವಾದಕಾರಣ ಅದು ಮುಖ್ಯವಾಗಿ ಆವಶ್ಯಕವಾದ ವಿಷ್ಣುಲಾಂಛನವಾಗಲಾರದು. ಒಂದುವೇಳೆ ಹಾಗೆ ಆದಾಗ್ಯೂ ಸನ್ಯಾಸಾಶ್ರಮರೂಪವಾದ ವಿಷ್ಣುಲಾಂಛನವು "ನೈವಾಧಿಕಾರೀಸಂನ್ಯಾಸೀ" ಇತ್ಯಾದಿ ವಚನನಗಳಿಂದ ಆಲಯವಲ್ಲಿನ ಪೂಜಾದಿಗಳಿಗೆ ಬಾಧಕವೇ ಆಗಿರುವದರಿಂದ ಸಾಧಕವೆಸ್ಸುಮಾತ್ರಕ್ಕೂ ಅಲ್ಲವು ಮತ್ತು ಶೈವ ವೈಷ್ಣವಾದಿ ಪಂಚಮತಗಳನ್ನು ಸಿದ್ಧಾಂತರೂಪವಾಗಿಯೂ ಕಾಪಾಲಿಕ ಮತವನ್ನು ಪೂರ್ವಪಕ್ಷ ರೂಪವಾಗಿಯೂ ಶ್ರೀಶಂಕರಾಚಾರ್ಯರು ಸ್ಥಾಪಿಸಿದರೆಂದು ಶಂಕರವಿಜಯದಲ್ಲಿರುವದು. ಯಥಾ (೭೦) ಪ್ರಕರಣೆ—

"ಕೃತಾಂಜಲಿ ಪುಟಂಪಟುಕನಾಥ ಮಾಲೋಕ್ಯ ಪರಮಗುರು ರ್ಭಗವಾನಿದಮಾಹ ಭೋಃ ಶಿಷ್ಯ ದೇವಸಿದ್ಧಾನಾಂ ತೇಷಾಂ ಶೈವವೈಷ್ಣವಸೌರಶಾಕ್ತ ಗಾಣಾಪತ್ಯಾನಾಂ ಪೂರ್ವಪಕ್ಷನ್ಯತ್ತ್ರೈಭವನ್ಮತಂರಚಯ ತದಭಾವೆ ತೇಷಾಂ ಸಿಧ್ಧಾನ್ತತಾ ನಘಟತೆ ಇತಿ" । ಇತ್ಯಾದಿ.

ಹೀಗೆ ದೇವಸಿದ್ಧವಾದ ಸಿದ್ಧಾನ್ತರೂಪವಾದ ವೈಷ್ಣವಮತವನ್ನು ಶಂಕರಾಚಾರ್ಯರು ತಮಗೆ ಅಂತರಂಗಶಿಷ್ಯರಾದ ಇಬ್ಬರಿಂದ ಸ್ಥಾಪಿಸಿದಕಾಲದಲ್ಲಿ ಶಂಖಚಕ್ರಾದಿಧಾರಣ ರೂಪವಾದ ವಿಷ್ಣುಲಾಂಛನ ಸಹಿತವಾದ ವೈಷ್ಣವಮತವನ್ನೆ ಸ್ಥಾಪಿಸಿದರೆಂದು ಅದೇ ಶಂಕರವಿಜಯದಲ್ಲಿರುವದು. ಯಥಾ ೬ ಪ್ರಕರಣೆ

"ಶೇಷವಾಯುಸತ್ಯಜಾತೌ ಲಕ್ಷ್ಮಣಹಸ್ತಾಮಲಕೌ ಸ್ವಾನ್ತರಂಗಶಿಷ್ಯೌ" ಇತ್ಯಾರಭ್ಯತಾಭ್ಯಾಂ ನಂದಿತಪಾದಃ ಪರಮಗುರುರ್ದಯಾಂಬುಧಿರಿದಮಾಹ—ವಿಷ್ಣುಮತಂ ಷಡ್ವಿಧಭೇದ ವಿರಾಜಿತಂ ಸಕಲಮನುಜ ಮೋಹಕರಂ ದ್ವಿಪಂಚಮುದ್ರಾ

ಲಿಂಗೇ ನಾರಾಯಣಾಷ್ಟಾಕ್ಷರ ಮಂತ್ರೋಪದೇಶ ಮೂಲಂ ದೃ
ಷ್ಟ ಸೃಷ್ಟ ದೋಷವರ್ಜಿತಂ ಕಲ್ಪಯಿತಂ... ಇತ್ಯನಂತರಂ
ಸಹಿಪೂರ್ವಭಾಗೇ ಲಕ್ಷ್ಮಣಾಚಾರ್ಯಃ ಕಿಲ ದಿಗ್ವಿಜಯಂ ಕೃತ್ವಾ
ಕಾಂಶ್ಚಿದ್ಬ್ರಾಹ್ಮಣಾದೀನ್ ಸಚ್ಛಿದ್ರೋರ್ಧ್ವಪುಂಡ್ರಧಾರಣಶಂ
ಖಚಕ್ರಾಂಕ ಭಾಸುರಭುಜಯುಗಲಾನ್ ಕೃತ್ವಾ ಭಾಷ್ಯಾದಿಗ್ರಂ
ಧಸೆಯ ಮಕರೋತ್. ಹಸ್ತಾಮಲಕಸ್ತು...ಪಂಚಮುದ್ರಾಂಕ
ವಿರಾಜಿತಾನ್ ಭಗವದಷ್ಟಾಕ್ಷರ ಮಂತ್ರೋಪಾಸಕಾನ್ ಕಾಂಶ್ಚಿ
ದ್ಬ್ರಾಹ್ಮಣಾದೀನ್ ಕೃತ್ವಾ" ಇತ್ಯಾದಿ

ಹೀಗಿರುವ ಶಂಕರವಿಜಯವನ್ನು ನೋಡಿದರೆ ವೈಷ್ಣವಮತಕ್ಕೆ ಅಸಾಧಾರಣವಾದ ಶಂಖಚಕ್ರಲಾಂಛನವೇ ಮುಖ್ಯವಾದ ವಿಷ್ಣುಲಾಂಛನವೆಂದು ಇವರು ಒಪ್ಪದೆ ಇರಲಾರರು.

ಅನಂತರ [" ಪರಂತು ವೈದಿಕಾರಾಧನಕ್ರಮವನ್ನನುಷ್ಠಿಸತಕ್ಕವರೆಂಬುವದು ಮಾತ್ರ ನಿಜ ಇವರು ವೈದಿಕಶ್ರೇಷ್ಠರಾದ್ದರಿಂದಲೆ ಇವರು ಶ್ರೀ ರಂಗನಾಥಸ್ವಾಮಿಯವರ ಪೂಜೆ ಮಾಡಿದ್ದು ಯುಕ್ತವೆಂದು ಸ್ಥಾಪಿಸಲ್ಪಟ್ಟಿರುವದು "] ಎಂದು ಬರೆದಿರುವರು. ಶ್ರೀ ಶೃಂಗೇರಿಸ್ವಾಮಿಗಳವರು ವೈದಿಕಾರಾಧನಕ್ರಮವನ್ನು ಮಾಡತಕ್ಕವರಾದಾಗ್ಯೂ ಪಂಚರಾತ್ರೋಕ್ತರೀತ್ಯಾ ವೈದಿಕಾರಾಧನವನ್ನು ಮಾಡುವವರಲ್ಲವಾದ್ದರಿಂದ ಪಂಚರಾತ್ರಾನುಸಾರಿಯಾದ ಆಲಯದಲ್ಲಿ ಅಂಥವರು ಮಾಡುವದು ಯುಕ್ತವಾಗಲಾರದು. ಪಂಚರಾತ್ರೋಕ್ತ ಮಾರ್ಗದಿಂದ ಪೂಜೆ ನಡೆಯುತ್ತಿರುವ ಸ್ಥಲದಲ್ಲಿ ಬೇರೆ ಯಾವಮಾರ್ಗದಿಂದಲೂ ಪೂಜೆನಡಿಸಕೂಡದೆಂಬ ವಿಷಯವನ್ನು ಪೂರ್ವದಲ್ಲಿಯೆ ನಿರೂಪಿಸಿರುವೆವು ವೇದದಲ್ಲಿ ಪ್ರತ್ಯಕ್ಷವಾಗಿ ಎಲ್ಲಿಯೂ ಆರಾಧಕ್ರಮವು ಹೇಳಲ್ಪಡಲಿಲ್ಲವಾದ್ದರಿಂದ ಸ್ಮೃತಿ ಸೂತ್ರಾದಿಗಳಲ್ಲಿ ಹೇಳಲ್ಪಟ್ಟ ಆರಾಧನಕ್ರಮವೇ ವೈದಿಕಕ್ರಮವೆಂದು ಇವರೂ ಹೇಳಬೇಕಷ್ಟೆ? ಅಂಥಾ ಸ್ಮೃತಿ ಸೂತ್ರ

ಗಳಲ್ಲಿಯೆ ಶಂಖ ಚಕ್ರ ಧಾರಣವಿಲ್ಲದವರಿಗೆ ಮತ್ತು ಸನ್ಯಾಸಿಗಳಿಗೆ ಆಲಯಸ್ಥ ಬಿಂಬಾರಾಧನದಲ್ಲಿ ಅಧಿಕಾರವಿಲ್ಲವೆಂದು ಹೇಳಲ್ಪಟ್ಟಿರುವದು.

ಶೌನಕೀಯಾಲಯಾರ್ಚಾಪ್ರತಿಷ್ಠಾಯಾಂ—

ಗೃಹಸ್ಥೇನೈವ ಸಂಸ್ಪೃಶ್ಯಾ ದೀಕ್ಷಿತೇನ ಹರೇಸ್ತನುಃ ।
ಅನ್ಯೇನಸ್ಪರ್ಶಿತಾಸಾಚೇತ್ ಪ್ರೋಕ್ಷಣೇನವಿಶುದ್ಧ್ಯತಿ ॥
ಅಚಕ್ರಧಾರಿಣಾಸ್ಪೃಷ್ಟಂ ಗಾತ್ರಂಶೂದ್ರೇಣ ಚೈವಹಿ ।
ಪುನಃಪ್ರತಿಷ್ಠಾಂಕೃತ್ವೈವ ಪೂಜಯೇ ದಾಲಯೇಹರೇಃ ॥
ಬಿಂಬಂಪಸ್ಪರ್ಶ ತುರ್ಯದ್ವೈ ವಾನಪ್ರಸ್ಥಯತೀಶ್ವರೌ ।
ನಾಧಿತಿಷ್ಠಂತಿತದ್ಬಿಂಬಂ ವಿಷ್ಣುಸ್ಸತ್ಯಂ ವದಾಮ್ಯಹಂ ॥ಇತಿ.

ಆದ್ದರಿಂದಲೇ—[ "ವಿಷ್ಣುದೀಕ್ಷೆಯಂ ಕೈಕೊಂಡವರಲ್ಲವೆಂಬುವದು ಶುದ್ಧ ಸುಳ್ಳಾದದ್ದು

ಅದು ಹ್ಯಾಗೆಂದರೆ (ವೈದ್ಯನಾಥದೀಕ್ಷಿತೀಯೆ ಸನ್ಯಾಸಸಲ ನಿರೂಪಣೆವ್ಯಾಸಃ।

ದ್ವೇರೂಪೆ ವಾಸುದೇವಸ್ಯ ಚರಂಚಾಚರಮೇವಚ [
ಚರಂಸಂನ್ಯಾಸಿನಾಂರೂಪಂ ಅಚರಂಪ್ರತಿಮಾದಿಕಂ ।

ತತ್ರೈವಕ್ಷತ್ರಿಯಾದೀನಾಂ ಸನ್ಯಾಸಾಭಾವನಿರೂಪಣ ಪ್ರಕರಣೆ ಅತ್ರಿಃ—

ನತಾವನ್ಮುಚ್ಯತೆದುಃಖಾತ್ ಜನ್ಮಮೃತ್ಯೋಶ್ಚಬಂಧನಾತ್ ।
ಯಾವನ್ನಧಾರಯೆದ್ವಿಪ್ರೋ ವೈಷ್ಣವಂಲಿಂಗಮಾದರಾತ್ ॥
ಮುಖಜಾನಾಮಯಂಧರ್ಮೊ ವೈಷ್ಣವಂಲಿಂಗಧಾರಣಂ ।
ಬಾಹುಜಾತೊರುಜಾತಾನಾಂ ನಾಯಂಧರ್ಮೊವಿಧೀಯತೆ ॥

(ವೈಷ್ಣವಲಿಂಗಧಾರಣಂ ಸಂನ್ಯಾಸಃ) ಎಂಬದಾಗಿ ಹೇಳಿ ಈಪ್ರಕಾರ ಸನ್ಯಾಸಿ ಸಾಮಾನ್ಯಕ್ಕೂ ಸಾಕ್ಷಾತ್ ವಿಷ್ಣುರೂಪತ್ವ ಹೇಳಲ್ಪಟ್ಟಿರುವದಲ್ಲದೆ ಸನ್ಯಾಸಕ್ಕೇನೆ ವೈಷ್ಣವಲಿಂಗವೆಂದು ರೂಢಿ ಇರುವದ್ದರಿಂದಲೂ ( ಅಷ್ಟಾಕ್ಷರೀಂ ಸಮುಚ್ಚಾರ್ಯ ಯತಯಸ್ತುನಮಸ್ಕೃತಾಃ। ಸ್ಮೃತನಾರಾಯಣಾಷ್ಟಂತಿ

ಪ್ರಾಣಿನಾಂ ಪಾಪಪಂಜರಂ) ಎಂಬದಾಗಿ ಹೇಳಿರುವದ್ದರಿಂದ ಇವರನ್ನ ದರ್ಶನನಮಾಡುವಾಗ ನಾರಾಯಣಾಷ್ಟಾಕ್ಷರೀ ಮಂತ್ರವನ್ನು ಉಚ್ಚರಿಸಿ ನಮಸ್ಕರಿಸಬೇಕೆಂತಲೂ, ಇವರು ಸರ್ವದಾ ನಾರಾಯಣಸ್ಮರಣವಂ ಮಾಡಬೇಕೆಂತಲೂ ಇರುವದ್ದರಿಂದ ಇದಕ್ಕಿಂತಲೂ ಉತ್ತಮವಾದ ವಿಷ್ಣುದೀಕ್ಷೆಯು ಲೋಕದಲ್ಲಿ ಯಾವದೂಯಿಲ್ಲ'' ] ಎಂದು ಬರದಿರುವದು ಅಸಂಬದ್ಧಪ್ರಲಾಪವಾಗಿರುವದು. ಇವರು ಉದಾಹರಿಸಿರುವ ವೈದ್ಯನಾಥೀಯೋದಾಹೃತ ವಚನದಲ್ಲಿ ಸಂನ್ಯಾಸವು ವೈಷ್ಣವಲಿಂಗವೆಂದು ಇರುವದೇಹೊರ್ತು ವೈಷ್ಣವ ದೀಕ್ಷೆಎಂದು ಇಲ್ಲವು. ಲಿಂಗಶಬ್ದವು ಚಿಹ್ನಪರ್ಯಾಯವಾದರೂ ದೀಕ್ಷಾಪರ್ಯಾಯವಾಗಲಾರದು. ಮತ್ತು ತತ್ತಚ್ಛಾಸ್ತ್ರಸ್ಥ ವಚನಗಳಿಗೆ ತತ್ತಚ್ಛಾಸ್ತ್ರಾನುಸಾರಿಯಾದ ಅರ್ಥವನ್ನು ಬಿಡದೆ ಅರ್ಥಹೇಳಬೇಕೆ ಹೊರತು ಯಥಾಕಥಂಚಿತ್ ಆಗುವ ಅರ್ಥವನ್ನು ಪರಿಗ್ರಹಿಸುವ ಪಕ್ಷಕ್ಕೆಗೃಹಸ್ಥನನ್ನು ಕುರಿತು ಇರುವ ವಿಧಿ ನಿಷೇಧಗಳು ಬ್ರಹ್ಮಚಾರಿಗೂ ಗೃಹಾವಸ್ಥಿತತ್ವ ಪ್ರಯುಕ್ತ ಸಂಭವಿಸಬೇಕಾಗಿ ಬರುವದು. ಆದ್ದರಿಂದ ಆಗಮಶಾಸ್ತ್ರದಲ್ಲಿನ ದೀಕ್ಷಿತಾದೀಕ್ಷಿತ ಪದಗಳಿಗೆ ಆಗಮಸಾಸ್ತ್ರಸಿದ್ಧ ದೀಕ್ಷಾಯುಕ್ತ ತದ್ಭಿನ್ನರೆ ಅರ್ಥವಾಗಬೇಕಾದಕಾರಣ—ಅದೀಕ್ಷಿತೈರನ್ಯತಂತ್ರ ದೀಕ್ಷಿತೈರರ್ಚಕೇತರೈಃ ।

ಸ್ಪೃಷ್ಟೇಬಿಂಬೇತಥಾಕುರ್ಯಾತ್ ಸ್ನಪನಂತ್ವಧಮಾಧಮಂ ॥

ಇತ್ಯಾದಿ ಪ್ರೋಕ್ತೋದಾಹೃತ ವಚನಗಳಿಂದ ಶ್ರೀಂಗೇರಿ ಸ್ವಾಮಿಗಳು ಮಾಡಿದ ಗರ್ಭಗೃಹಪ್ರವೇಶಾದಿಗಳು ನಿಷಿದ್ಧವಾಗದೆ ಹೋಗಲಾರದು.

[ "ಇತರ ದೀಕ್ಷೆಗಳೆಲ್ಲಾ ವೇದವಿರುದ್ಧವಾದ ದೀಕ್ಷೆಗಳು. ಸನ್ಯಾಸವೇ ಮುಖ್ಯವಾದ ವಿಷ್ಣುದೀಕ್ಷೆಯು''] ಎಂದು ಬರದಿರುವದು ಉದಾಹೃತಾನೇಕ ಪ್ರಮಾಣವಿರುದ್ಧವಾಗಿರುವದಲ್ಲದೆ ಸೋಮಯಾಗ ದೀಕ್ಷಾದಿಗಳಿಗೆ ವೇದವಿರುದ್ಧ ದೀಕ್ಷಾತ್ವ ಪ್ರಸಂಜಕವಾಗಿಯೂ ಇರುವದು. ಹೀಗಾದ್ದ

ರಿಂದಲೇ [" ಆದ್ದರಿಂದ ವಿಷ್ಣುಲಾಂಛನನಂ ಧರಿಸತಕ್ಕವರಲ್ಲವೆಂಬುವದೂ, ವಿಷ್ಣುದೀಕ್ಷೆಯಂ ಕೈಕೊಂಡವರಲ್ಲವೆಂಬುವದೂ ಸಹ ಸರಿಯಾದದ್ದಲ್ಲವು. ಆದ್ದರಿಂದ ಇವರು ಗರ್ಭಗೃಹಕ್ಕೆ ಪ್ರವೇಶಮಾಡಿ ಆರ್ತಿ ಅರ್ಚನೆ ಮಾಡಿದ್ದರಿಂದ ದೇವರಿಗೆ ಸಂಪ್ರೋಕ್ಷಣೆ ಮಾಡಬೇಕೆಂದು ಹೇಳಿರುವದಕ್ಕೆ ಉಪಹರಿಸಿರುವ ಈ ಕಾರಣಗಳು ಸಾಧಕವಾಗಲಿಲ್ಲವು. "] ಎಂದು ಬರೆದಿರುವದು ಅಯುಕ್ತವಾಗಿರುವದು. ಸನ್ಯಾಸಿಗಳಿಗೆ ದೇವಾಲಯಸ್ಥ ಬಿಂಬಪೂಜಾದಿಗಳಲ್ಲಿ ಅಧಿಕಾರವಿಲ್ಲವೆಂದು ಬೋಧಿಸುವ "ನೈವಾಧಿಕಾರೀ ಸನ್ಯಾಸೀ ಬ್ರಾಹ್ಮಣೋಪ್ಯುಕ್ತಲಕ್ಷಣಃ । ಇತರೇಪಿತ್ರಯೋವರ್ಣಾಃ ಯಜನೇನಾಧಿಕಾರಿಣಃ " ಇತ್ಯಾದಿ ವಚನಗಳು ಪಾದ್ಮಸಂಹಿತಾದಿಗಳಲ್ಲಿ ಇರುವದರಿಂದಲೂ "ತಂತ್ರೋಕ್ತೇನ" ಇತ್ಯಾದಿ ಸೂತಸಂಹಿತಾವಚನವು ಪ್ರಕೃತಾನುಪಯುಕ್ತವೆಂದು ಪೂರ್ವದಲ್ಲಿ ಅನೇಕವಿಧವಾಗಿ ನಿರೂಪಿಸಿರುವದರಿಂದಲೂ [" ಈ ಸನ್ಯಾಸಿಗಳಿಗೆ ಪೂಜಾಧಿಕಾರವಿಲ್ಲವೆಂದು (ನೈವಾಧಿಕಾರೀ ಸನ್ಯಾಸೀ) ಎಂಬದಾಗಿ ಒಂದು ವಚನವು ಬರೆಯಲ್ಪಟ್ಟಿದೆಯಷ್ಟೆ. ಇದು ಧರ್ಮನೆಯ ಸ್ಥಲದಲ್ಲಿರುವದೆಂದು ಹೇಳದಿದ್ದಾಗ್ಯೂ ಪೂರ್ವದಲ್ಲಿ ಹೇಳಲ್ಪಟ್ಟಿರುವ ಸೂತಸಂಹಿತಾ ಉತ್ತರಭಾಗದ ೨ನೇ ಅಧ್ಯಾಯದ ೪೫ ನೇ ಶ್ಲೋಕವಾದ ( ತಂತ್ರೋಕ್ತೇನಪ್ರಕಾರೇಣ ದೇವತಾಯಾಃ ಪ್ರತಿಷ್ಠಿತಾ ॥ ಸಾಪಿವಂದ್ಯಾಚ ಸೇವ್ಯಾಚ ಪೂಜನೀಯಾಚ ವೈದಿಕೈಃ ) ಎಂಬ ವಚನದಿಂದಲೂ ಮತ್ತು ( ಪರಾಶರಮಾಧವೀಯೆ ಯತಿಧರ್ಮನಿರೂಪಣಪ್ರಕರಣೆ ಅತ್ರಿಃ— ಸ್ನಾನಂ ಸುರಾರ್ಚನಂ ಧ್ಯಾನಂ ಪ್ರಾಣಾಯಾಮೋ ಬಲಿಸ್ತುತಿಃ ॥ ಭಿಕ್ಷಾಟನಂ ಜಪಸ್ಸಂಧ್ಯಾ ತ್ಯಾಗಃಕರ್ಮಫಲಸ್ಯಚ ॥ ಏಷಸ್ವಧರ್ಮೋ ವಿಖ್ಯಾತಃಯತೀನಾಂ ನಿಯತಾತ್ಮನಾಂ ॥ ತತ್ರೈವ—ಭಿಕ್ಷಾಟನಂಜಪಸ್ನಾನಂ ಧ್ಯಾನಂಶೌಚಂ ಸುರಾರ್ಚನಂ ॥ ಕರ್ತವ್ಯಾನಿ ಷಡೇತಾನಿ ಸರ್ವದಾ ನೃಪದಂಡವತ್ ) ಮತ್ತು (ವೈದ್ಯನಾಥದೀಕ್ಷಿತೀಯೆ ಯತಿ

ಧರ್ಮಪ್ರಕರಣೆ ದಂತಧಾವನಾದಿಕಮಾರಭ್ಯ ಉಕ್ತಂ—ಗುರ್ವಾದಿವಂದನಂ ಕೃತ್ವಾ ದಂಡಂ ನಭಸಿ ಧಾರಯೇತ್ ॥ ಪ್ರಕ್ಷಾಳ್ಯಪಾದಾವಾಚಮ್ಯ ದೇವಪೂಜಾಂ ಪ್ರಕಲ್ಪಯೇತ್ ॥ ಗುರೂಪದಿಷ್ಟಮಾರ್ಗೇಣ ನ್ಯಾಸಧ್ಯಾನಾದಿಪೂರ್ವಕಂ ॥ ಸ್ವಯಂಪತಿತತುಲಸೀ ಪತ್ರಾದ್ಯೈಸ್ಸ್ವಯಮಾಹೃತೈಃ ॥ ಪೂಜಯೇನ್ಮೋಕ್ಷದಂ ವಿಷ್ಣುಂ ಜ್ಞಾನದಂಚ ಮಹೇಶ್ವರಮಿತಿ) ಇತ್ಯಾದಿ ವಚನಗಳಿಂದ ಯತಿಗಳಿಗೆ ವಿಷ್ಣ್ವಾದಿ ದೇವತಾರ್ಚನವು ವಿಧಿಪ್ರಾಪ್ತವಾಗಿರುವದರಿಂದ ಸನ್ಯಾಸಿಗಳಿಗೆ ವಿಷ್ಣುಪೂಜಾಧಿಕಾರವಿಲ್ಲವೆಂಬುವದು ಶುದ್ಧ ತಪ್ಪಾದರದ್ದು." ] ಎಂದು ಬರೆದಿರುವದು ಅಸಂಗತವೆಂದು ವ್ಯಾಖ್ಯಾತವಾಯಿತು.

"ಚತುರ್ಣಾಂ ಬ್ರಾಹ್ಮಣಾದೀನಾಂ ವರ್ಣಾನಾಂ ಕಮಲಾಸನ" ಇತ್ಯಾದಿ ಪಾದ್ಮಸಂಹಿತಾವಚನಗಳಿಂದಲೂ,

"ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಶ್ಶೂದ್ರೈಶ್ಚ ಕೃತಲಕ್ಷಣೈಃ ।
ಅರ್ಚನೀಯಶ್ಚ ಸೇವ್ಯಶ್ಚ ನಿತ್ಯಯುಕ್ತೈಸ್ಸ್ವಕರ್ಮಭಿಃ ॥"

ಇತ್ಯಾದಿ ಮಹಾಭಾರತಾದಿ ವಚನಗಳಿಂದಲೂ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂ ವಿಷ್ಣುಪೂಜೆಯಲ್ಲಿ ಅಧಿಕಾರವು ಸಿದ್ಧಿಸುವಲ್ಲಿ ಸನ್ಯಾಸಿಗೆ ವಿಷ್ಣುಪೂಜಾಧಿಕಾರವಿಲ್ಲವೆಂದು ನಾವು ಎಂದಿಗೂ ಹೇಳಲಾರೆವು. ಆದರೆ ಅವರವರು ಪ್ರತಿದಿವಸದಲ್ಲಿಯೂ ಆರಾಧಿಸುತ್ತಲಿರುವ ಗೃಹಾರ್ಚೆಯನ್ನು ಅವರವರು ಆರಾಧಿಸಬೇಕೆಂದು ಉದಾಹೃತ ಪ್ರಮಾಣಗಳಿಗೂ ಸನ್ಯಾಸಿ ವಿಷಯದಲ್ಲಿ ಇವರು ಉದಾಹರಿಸಿರುವ ಪರಾಶರಮಾಧವೀಯಾದಿ ವಚನಗಳಿಗೂ ಅರ್ಥವಾಗುವದೇ ಹೊರತು ಲೋಕದಲ್ಲಿರುವ ವಿಷ್ಣುಬಿಂಬಕ್ಕೆಲ್ಲಾ ಎಲ್ಲರೂ ಆರಾಧನೆಯನ್ನು ಮಾಡಬೇಕೆಂದು ಅರ್ಥವಾಗಲಾರದು. "ಋತುಕಾಲೇ ಸ್ತ್ರಿಯಂಗಚ್ಛೇತ್" ಇತ್ಯಾದಿ ಪ್ರಮಾಣವಚನದಿಂದ ಋತುಕಾಲದಲ್ಲಿ ಸ್ವಭಾರ್ಯಾಗಮನ ವಿಧಿಸುವದೇ ಹೊರತು ಬೇರೆ ಇಲ್ಲದಷ್ಟೆ. ಹೀಗಿರುವದರಿಂದಲೇ— [ "ಆಗಮರೀತ್ಯಾ ಮಾಡುವ ಪೂಜಾಧಿಕಾರವಿಲ್ಲವೆಂದರೆ

ಅದು ಇಷ್ಟ್ಯವೇಸರಿ. ಶ್ರೀ ಸ್ವಾಮಿಗಳವರು ಆಗಮರೀತ್ಯಾ ಅರ್ಚನೆ ಮಾ ಡಲೇಇಲ್ಲವು '' ] ಎಂದು ಬರೆದಿರುವದು ಅಸಂಭದ್ಧಪ್ರಲಾಪವಾಗಿರು ವದು. ಸ್ವಾಮಿಗಳು ಪೂಜೆಯನ್ನು ಆಗಮರೀತ್ಯಾಮಾಡದೇ ಮಾರ್ಗಾಂ ತರದಿಂದ ಮಾಡಿರುವದರಿಂದಲೇ " ಯೋಯಜೇದನ್ಯಮಾರ್ಗೇಣ '' ಇತ್ಯಾ ದಿ ನಿಷೇಧವಿಷಯವಾಗಿರುವದೆಂದಲ್ಲವೇ ನಾವು ಹೇಳುವದು ಅನಂತರ [" ಮತ್ತು ( ನೈವಾಧಿಕಾರೀ ಸನ್ಯಾಸೀ ) ಎಂಬ ವಚನದಲ್ಲಿ ( ಯಜನೇನಾ ಧಿಕಾರಿಣಃ ) ಎಂದು ಇರುವದಕ್ಕೆ ' ಯಜನೇ ' ಅಂದರೆ ತಾಂತ್ರಿಕವಾದ ಹೋಮಾದಿಗಳಲ್ಲಿ ಅಧಿಕಾರಿಗಳಲ್ಲವೆಂದು ಹೇಳಬೇಕು. ಸನ್ಯಾಸಿಗಳಿಗೂ ಕ್ಷತ್ರಿಯಾದಿಗಳಿಗೂ ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡುವದಕ್ಕೆ ಅಧಿ ಕಾರವಿಲ್ಲವಾದ್ದರಿಂದ ಸನ್ಯಾಸಿಗಳು ಕ್ಷತ್ರಿಯಾದಿಗಳೂ ಸಹ ತಾಂತ್ರಿಕ ಹೋಮಾದಿಗಳಲ್ಲಿ ಅಧಿಕಾರಿಗಳಲ್ಲವೆಂತ ತಿಳಿದ ವಿದ್ವಾಂಸರು ಹೇಳುವರು.

ಮತ್ತು ಈ ನಮ್ಮ ಉಪನ್ಯಾಸದ ೫ ನೇ ಸಂಖ್ಯೆಗೆ ಸೇರಿಸಿರುವ ' ಅದೀಕ್ಷಿತೈರ್ನರೈರೆಂಬ ' ಎಂದು ಮೊದಲುಮಾಡಿಕೊಂಡು ಬರೆದಿರುವ ಶ್ರೀವೈಷ್ಣವರು ಉದಹರಿಸಿರುವ ವಚನದ ಕಡೇಭಾಗದಲ್ಲಿ ( ಲೋಭಾದ್ವಾ ಯದಿವಾಮೋಹಾ ಚರ್ಚಯೇದ್ಯದಿದೇಶಿಕಃ | ತತ್ಪೂಜಾನಿಷ್ಫಲಂಯಾತಿ) ಎಂಬುವ ವಚನದಲ್ಲಿ ( ಈಶ್ವರಸಂಹಿತಾಯಾಂ ಪ್ರಾಯಶ್ಚಿತ್ತಾಧ್ಯಾಯೆ ಅಸ್ನಾತೋದೇಶಿಕಶ್ಚೈವಂ ಚಂಡಾಲಾದ್ಯುಪಘಾತಕಃ | ಕೇಶಾಸ್ಥ್ಯಾದ್ಯ ಶುಚಿಸ್ಪೃಷ್ಟಃ ಸ್ತ್ರಿಯಂಗತ್ವಾಪ್ಯನಾಪ್ಲುತಃ || ಸ್ಪೃಶೇಚ್ಚೇದ್ಭಗವ ದ್ಬಿಂಬಂ ಸ್ನಾಪಯೇನ್ನವಭಿರ್ಘಟೈಃ || ) ಎಂಬುವಸ್ಥಳದಲ್ಲಿಯೂ ಇರುವ ( ದೇಶಿಕಃ ) ಎಂಬ ಪದವು ಸನ್ಯಾಸಿಗಳ ಪರವೆಂದು ಯಾರಾದರೂ ಭ್ರಾಂತಿ ಪಟ್ಟಾರು ; ಆ ಪದಗಳು ಸನ್ಯಾಸಿಗಳ ಪರವಲ್ಲವು. ಪೂಜೆ ಮಾಡುವ ಅರ್ಚಕರ ಪರವು. ಹಿಂದೆ ಇರುವ ಸಂದರ್ಭಗಳಲ್ಲಿ ಸಂಪ್ರೋಕ್ಷಣೆ ಮಾಡ ಬೇಕಾದಸಂದರ್ಭದಲ್ಲಿ ಹಾಗೆ ಸಂಪ್ರೋಕ್ಷಣೆ ಮಾಡದೆ ದೇಶಿಕನು ಪೂಜೆಮಾ

ಡಿದರೆ ಅವನು ಮಾಡಿದ ಪೂಜಾ ನಿಷ್ಫಲವಾಗುತ್ತೆಂದು ಹೇಳಿ ಆದ್ದರಿಂದ ಸಂಪ್ರೋಕ್ಷಣೆಮಾಡಿ ಪೂಜೆ ಮಾಡಬೇಕೆಂದು ಹೇಳಿರುವದ್ದರಿಂದ ದೇಶಿಕನಂದರೆ ದೀಕ್ಷಾಬದ್ಧನಾದ ಅರ್ಚಕನೆಂದೇ ಅರ್ಥವು. [ ಅಸ್ನಾತೋದೇಶಿಕಃ ) ಅನ್ನುವಸ್ಥಳದಲ್ಲಿಯೂ ದೇಶಿಕನುದರೆ ದೀಕ್ಷಾಬದ್ಧನಾದ ಅರ್ಚಕನೇ ಎಂದು ಹೇಳಬೇಕು " ] ಎಂದಿರುತ್ತೆ. ಇದು ಅಯುಕ್ತವು. ಹ್ಯಾಗಂದರೆ—ಪ್ರಕರಣಾನುಸಾರ ದೇವಾಲಯಸ್ಥನಾದ ಪರಾರ್ಥವೆಂಬುವ ಬಿಂಬವನ್ನ ಆರಾಧಿಸುವದೇ ಅಲ್ಲಿನ ಯಜನಶಬ್ದಕ್ಕೆ ಅರ್ಥವೆಂದು ಹೇಳಬೇಕು. " ಯಜದೇವಪೂಜಾಯಾಂ- " ಎಂದಲ್ಲವೇ ಧಾತುಪಾಠವಿರುವದು. ಹಾಗಲ್ಲದಪಕ್ಷದಲ್ಲಿ " ಲಿಂಗಂಗೃಹೀಯತಿ ವಾಪಿ ಸಂಸ್ಥಾಪ್ಯತುಯಜೇತ್ಸದಾ " ಇತ್ಯಾದಿ ನಿರ್ಣಯಸಿಂಧ್ವಾದ್ಯುದಾಹೃತ ವಚನಗಳಲ್ಲಿಯೂ ' ಯಜೇತ್ ' ಎನ್ನುವದಕ್ಕೆ ಹೋಮವೇ ಅರ್ಥವಾಗಬೇಕಾಗಿಬರುವದು. ಮತ್ತು ದೇವಾಲಯದಲ್ಲಿ ಸಕಲಜನರೂ ಹೋಮವಿಲ್ಲದೆ ಪೂಜೆ ಮಾಡಬಹುದೆಂದು ಅರ್ಥವಾಗಬೇಕಾಗಿಬರುವದು.

ಅನಂತರ [ " ಅಸ್ನಾತೋದೇಶಿಕಃ " ಎನ್ನುವಸ್ಥಳದಲ್ಲಿಯೂ ದೇಶಿಕನೆಂದರೆ ದೀಕ್ಷಾಬದ್ಧನಾದ ಅರ್ಚಕನೇ ಎಂದು ಹೇಳಬೇಕು. ಹಾಗಲ್ಲದಪಕ್ಷದಲ್ಲಿ ಅಸ್ನಾತನಾದ ದೇಶಿಕನು ಪೂಜೆಮಾಡಬಾರದೆಂದರೆ ಸ್ನಾನಮಾಡಿದ ಸನ್ಯಾಸಿ ಪೂಜೆ ಮಾಡಬಹುದಷ್ಟೆ, ಆಗ್ಯೆ ಇವರ ಇಷ್ಟಸಿದ್ಧಿಯೇ ತಪ್ಪಿಹೋಗುತ್ತೆ. ಆದ್ದರಿಂದ ಉಭಯತ್ರ ದೇಶಿಕಶಬ್ದಕ್ಕೆ ಸನ್ಯಾಸಿಗಳು ಅರ್ಥವಲ್ಲವು " ] ಎಂದಿರುತ್ತೆ. ಇದು ಭ್ರಾಂತಿಕಾರ್ಯವು ಸ್ನಾನಮಾಡದೆ ಇರುವ ದೀಕ್ಷಾಬದ್ಧನಾದ ಅರ್ಚಕನು ಪೂಜೆಮಾಡಕೂಡದೆಂದಲ್ಲವೇ ಇವರ ಅರ್ಥವು. ಹೀಗಾದರೆ ದೀಕ್ಷಾಬದ್ಧನಲ್ಲದವನು ಸ್ನಾನ ಮಾಡದೆ ಪೂಜೆಯನ್ನು ಮಾಡಬಹುದಷ್ಟೆ. ? ಆದ್ದರಿಂದ ಇಲ್ಲಿ ಅರ್ಚಕಪದಕ್ಕೆ ಪೂಜೆ ಮಾಡುವವರು ಎಂದೇ ಅರ್ಥ ಹೇಳಬೇಕು. ಹಾಗಾದರೆ ಪೂಜೆಯನ್ನು

ಮಾಡುವರು ಯಾರೇ ಆಗಲಿ ಸ್ನಾನ ಮಾಡದೆ ಪೂಜೆಮಾಡಕೂಡದೆಂದು ಅರ್ಥ ವಾಗುವದು. ಹಾಗಾದರೆ ಪ್ರಕೃತ ಶೃಂಗೇರಿಸ್ವಾಮಿಗಳೂ ಅದಕ್ಕೆ ವಿಷ ಯರೇ ಆಗುವರು ದೇವಾಲಯದಲ್ಲಿ ದೀಕ್ಷಾರಹಿತರು ಮಾಡುವ ಪೂಜೆ ಯನ್ನು ನಿಷೇಧಿಸುವ " ಅದೀಕ್ಷಿತೈಃ " ಇತ್ಯಾದಿ ವಚನಾಂತರವಿರುವದರಿಂದ ದೀಕ್ಷಾರಹಿತರು ಸ್ನಾನಮಾಡದೆ ಪೂಜೆ ಮಾಡಬಹುದೆಂಬ ಆಕ್ಷೇಪಕ್ಕೆ ಅವ ಕಾಶವಿಲ್ಲವೆಂದು ಇವರು ಹೇಳುವಪಕ್ಷಕ್ಕೆ ಶೃಂಗೇರಿಸ್ವಾಮಿಗಳು ಅದೀಕ್ಷಿ ತೈರಿತ್ಯಾದಿ ವಚನಾಂತರಕ್ಕೆ ವಿಷಯರಾಗಿಯೇ ಇರುವರು, ಆದ್ದರಿಂದ ಸರ್ವಥಾ ಇವರ ಇಷ್ಟಸಿದ್ಧಿಯಾಗಲಾರದು.

ಅನಂತರ [ " ಮತ್ತು ಈಗಲೂ ಹೊಸದಾಗಿ ಶಿವ ವಿಷ್ಣ್ವಾದಿ ದೇವ ರನ್ನು ಮತ್ತು ವಿಮಾನಾದಿಗಳನ್ನು ಪ್ರತಿಷ್ಠೆ ಮಾಡಿಸಬೇಕಾಗಿದ್ದರೆ ಯೋ ಗ್ಯರಾದ ಸನ್ಯಾಸಿಗಳಿಂದಲೇ ದೇವರನ್ನು ವಿಮಾನಾದಿಗಳನ್ನೂ ಪ್ರತಿಷ್ಠೆ ಮಾಡಿಸಿ ನೇತ್ರೋನ್ಮೀಲನಾದಿಗಳನ್ನು ಮಾಡಿಸಿ ಪ್ರಥಮ ಪೂಜೆಯನ್ನು ಸನ್ಯಾಸಿಗಳಿಂದಲೇ ಮಾಡಿಸುವ ಪದ್ಧತಿಯು ಲೋಕಪ್ರಸಿದ್ಧವಾಗಿದೆ." ] ಎಂದು ಅಪ್ರಸಿದ್ಧವಾದ ವಿಷಯವನ್ನೇ ಲೋಕಪ್ರಸಿದ್ಧವೆಂದು ಸ್ವೋಕ್ತಿ ವ್ಯಾಘಾತವನ್ನೇ ನೋಡದೆ ಬರೆದಿರುವರು. ಹೋಮದಲ್ಲಿ ಸನ್ಯಾಸಿಗ ಳಿಗೆ ಅಧಿಕಾರವಿಲ್ಲವೆಂದು ಇವರೇ ಹೇಳಿರುವರು. ಪ್ರತಿಷ್ಠೆಯು ಹೋಮ ಸಹಿತವಾಗಿಯೇ ಇರುವದರಿಂದ ಅಂಥಾ ಹೋಮವನ್ನು ಸನ್ಯಾಸಿಗಳಿಂದ ಹ್ಯಾಗೆಮಾಡಿಸುವರೆಂದು ಶಾಸ್ತ್ರಜ್ಞರು ಪರ್ಯಾಲೋಚಿಸಬೇಕು. ಗೃಹ ಸ್ಥರಿಂದಲೇ ಪ್ರತಿಷ್ಠೆ ನಡೆದ ತರುವಾಯ ಸನ್ಯಾಸಿಗಳು ತೀರ್ಥಪ್ರಸಾದ ಸ್ವೀಕರಿಸುವಂತೆ ಮಾಡುವದು ಮಾತ್ರ ಲೋಕಪ್ರಸಿದ್ಧವಾಗಿರುವದು.

ಅನಂತರ [ " ಮತ್ತು ಈ ತಾಂತ್ರಿಕರು ಪೂಜೆಮಾಡತಕ್ಕದ್ದು ತಂ ತ್ರೋಕ್ತದೀಕ್ಷೆಯೂ ಸಹ ಅಸಂಗತವಾದ್ದೆಂದು ತಿಳಿದೇ ಉತ್ತರದೇಶದಲ್ಲಿ ಅಂದರೆ ಸಮೀಪದಲ್ಲಿರುವ ತುಂಗಭದ್ರಾನದಿ ದಾಟಿದಮೇಲೆ ಶಿವಾಲಯದವ

ರಿವಿಗೂ ಇರುವ ಎಲ್ಲಾ ಪ್ರಸಿದ್ಧವಾದ ವಿಷ್ಣ್ವಾಲಯ ಶಿವಾಲಯಗಳು ಅಂದರೆ ಪಂಢರಾಪುರ, ಪ್ರಯಾಗ, ಕಾಶಿ, ಗಯಾ, ಕೇದಾರ ಮೊದಲಾದ ಕ್ಷೇತ್ರದಲ್ಲಿರುವ ಶಿವ ವಿಷ್ಣ್ವಾದಿ ದೇವರುಗಳಿಗೆ ಎಲ್ಲರೂ ಸ್ವತಃ ಪೂಜೆಮಾಡುವದೇ ಪ್ರಸಿದ್ಧವಾಗಿದೆ. ಅನೇಕ ಪುರಾಣಗಳಲ್ಲಿ ಪ್ರಸಿದ್ಧವಾಗಿಯೂ ಪಿತೃಗಳಿಗೆ ಮುಕ್ತಿಪ್ರದಾಯಕವೆಂದು ಎಲ್ಲರೂ ಒಪ್ಪಿ ಅತ್ಯಂತ ಪ್ರಸಿದ್ಧವಾಗಿರುವ ಗಯಾಕ್ಷೇತ್ರದಲ್ಲಿರುವ ವಿಷ್ಣುಪಾದ, ಗಯಾಗದಾಧರ, ಜನಾರ್ದನ ಮುಂತಾದ ದೇವರುಗಳಿಗೂ ಸರ್ವರೂ ಸ್ವತಃ ಪೂಜಿಸುತ್ತಾರೆ. ಆದ್ದರಿಂದ ಸನ್ಯಾಸಿಗಳಿಗೆ ಪೂಜಾಧಿಕಾರವಿಲ್ಲವೆಂದು ಹೇಳುವ ಉದ್ದೇಶ್ಯವು ಸಿದ್ಧಿಸಲಿಲ್ಲವು. " [ ಎಂದು ಬರೆದಿರುತ್ತೆ. ದಕ್ಷಿಣದೇಶಾಚಾರಕ್ಕಿಂತಲೂ ವಿಲಕ್ಷಣವಾಗಿಯೂ ವಿರುದ್ಧವಾಗಿಯೂ ಉತ್ತರದೇಶಗಳಲ್ಲಿ ಬಂಗಾಳ ಮೊದಲಾದ ಪ್ರದೇಶಗಳಲ್ಲಿಯೂ ಮತ್ಸ್ಯಭೋಜನಪ್ರಭೃತಿ ಅನೇಕಾಚಾರಗಳಿರುವವು. ಅವುಗಳೆಲ್ಲವೂ ದಕ್ಷಿಣದೇಶಾಚಾರಕ್ಕಿಂತಲೂ ಶ್ರೇಷ್ಠವಾದವುಗಳೆಂದು ಇವರುಒಪ್ಪುವರೋ ? ಮತ್ತು ಉತ್ತರದೇಶದ ಆಚಾರಗಳನ್ನೆಲ್ಲಾ ದಕ್ಷಿಣದೇಶದಲ್ಲಿಯೂ ಯುಕ್ತವೆಂದು ಇವರು ಅನುಷ್ಠಿಸುವರೋ ? ಮತ್ತು ಉತ್ತರದೇಶದ ಕ್ರಮವು ಅಸಂಗತವೆಂದು ತಿಳಿದು ದಕ್ಷಿಣದೇಶದಲ್ಲಿ ಆಗಮಪ್ರಕಾರ ಪೂಜಾದಿಗಳಂ 'ನಡಿಸುತ್ತಲಿರುವರು ಎಂದೇ ಯಾತಕ್ಕೆ ಹೇಳಬಾರದು ? ಶ್ರೀರಾಮದೇವರು ಮಾಡುತ್ತಿದ್ದ ದೇವತಾರಾಧನಾದಿಕ್ರಮವು ಪಂಚರಾತ್ರಶಾಸ್ತ್ರವನ್ನು ಅನುಸರಿಸಿಯೇ ಇರುವದೆಂಬ ಅಂಶವು ಶ್ರೀಮದ್ರಾಮಾಯಣವನ್ನು ಸಂಪ್ರದಾಯಪೂರ್ವಕ ತಿಳಿದವರಿಗೆ ವೇದ್ಯವಾಗಿರುವದು. ಆದ್ದರಿಂದ ಅಲ್ಲಲ್ಲಿ ಆಚರಣೆಯಲ್ಲಿರತಕ್ಕ ಶಾಸ್ತ್ರಸಂಪ್ರದಾಯವನ್ನು ಅತಿಕ್ರಮಿಸಿ ಆಡುವ ಮಾತುಗಳಿಂದ ಏನೂ ಫಲವಿಲ್ಲವು.

ಮುಖ್ಯವಾಗಿ ಸನ್ಯಾಸಿಗಳು ದೇವಸ್ಥಾನಗಳಲ್ಲಿ ಪೂಜಿಸಬಹುದಾದ ಪಕ್ಷದಲ್ಲಿ ಶಂಕರಾಚಾರ್ಯರಿಗಿಂತಲೂ ಸ್ಮಾರ್ತರಲ್ಲಿ ಅಧಿಕರಾದ ಸನ್ಯಾಸಿ

ಗಳು ಇಲ್ಲವಾದ್ದರಿಂದ ಅವರು ಯಾತಕ್ಕೆ ಎಲ್ಲಿಯೂ ಪ್ರೂಜೆ ಮಾಡಲಿಲ್ಲ ? ಶಂಕರವಿಜಯದಲ್ಲಿ ಅವರು ಹೋಗಿದ್ದ ದೇವಸ್ಥಾನಗಳಲ್ಲಿ ದೇವರಿಗೆ ನಮಸ್ಕಾರವನ್ನೂ ಸ್ತೋತ್ರವನ್ನೂ ಮಾಡಿರುವದಾಗಿ ಮಾತ್ರವಿರುವದೇ ಹೊರತು ಪೂಜೆಯನ್ನು ಮಾಡಿದಹಾಗೆ ಎಲ್ಲಿಯು ಊ ಇಲ್ಲವು

ಯಥಾ—ಆನಂದಗಿರಿಕೃತ ಶಂಕರವಿಜಯೇ (೩೦) ಪ್ರಕರಣೆ—

[ " ತತ್ರಪುರ್ಯಾಂ ವಿಚಿತ್ರಂ ವಿಷ್ವಕ್ಸೇನಗೋಪುರ ಪೂರ್ವಭಾಗೇ ವಿಪುಲತರಾಯ ಪ್ರಪಾಶಾಲಾಯಾಂ ಅಂತರ್ಗೃಹಾದಿ ಕಲ್ಪನಾಂ ಕೃತ್ವಾ ತತ್ರ ದೇವಗೃಹೇ ಶ್ರೀಮದಾಚಾರ್ಯಃ ...... ...ತದಧೀಶಂ ಗಣಪತಿಂ ಸ್ತುತ್ವಾ ಸುಖಂಚಿರಮಾಸ '' ಇತಿ.

(೪೪) ಪ್ರಕರಣೇ—" ತಸ್ಮಾದುದಙ್ಮಾರ್ಗಮವಲಂಬ್ಯ ಅಮರಲಿಂಗಂ ಕೇದಾರಲಿಂಗಂ ದೃಷ್ಟ್ವಾ ಕುರುಕ್ಷೇತ್ರಮಾರ್ಗಾದ್ಬದರೀನಾರಾಯಣ ದರ್ಶನಂ ಕೃತ್ವಾ ತತ್ರ ಶೀತಲೋದಕಸ್ನಾನಸ್ಯ ಅತಿದುಸ್ಸಹತ್ವಾತ್ ಹಿಮವತ್ಸಾನ್ನಿಧ್ಯಾಚ್ಚ ಭಗವಂತಮಿದಮುವಾಚ ಭೋನಾರಾಯಣ ಸ್ನಾನಾಯ ಉಷ್ಣೋದಕಂಮೇ ದೇಹೀತಿ ಸತುನಾರಾಯಣಃ ಸ್ಫಟಿಕಾದಧಃ ಪ್ರದೇಶಾದುಷ್ಣತೀರ್ಥಸರಿತ ಮುತ್ಪಾದಯಾಮಾಸ ಸರ್ವೇದ್ವಿಜಾಸ್ನಾತ್ವಾ ಶಂಕರಾಚಾರ್ಯಂ ತುಷ್ಟುವುಃ ತಸ್ಮಾದ್ದ್ವಾರಕಾದಿ ದಿವ್ಯಸ್ಥಲ ವಿಲೋಕನಾತ್ಪುರ ದಕ್ಷಿಣ್ಯಮಯೋಧ್ಯಾಂಪ್ರಾಪ ತಸ್ಮಾತ್ಪುರಾ ದ್ಗಯಾಯಾ ವಿಷ್ಣುನಾದಿ ದರ್ಶನಂಕೃತ್ವಾ ಜಗನ್ನಾಥಮಾರ್ಗತಃ ಪರ್ವತಂಪ್ರಾಪ ತತ್ರಮಹಾದೇವಂ ಮಲ್ಲಿಕಾರ್ಜುನಂ ತಚ್ಛಕ್ತಿಮದ್ವೈತವಿದ್ಯಾರೂಪಿಣೀಂ ಭ್ರಮರಾಂಬಾಂನತ್ವಾ ತತ್ರವಾಸಮಾಸ್ಥಿತೆ ,, ಇತ್ಯಾದಿ (೬೩) ಪ್ರಕರಣೇ— " ತಸ್ಮಾದಹೋಬಲಾಖ್ಯಂ ನೃಸಿಂಹಾವಿರ್ಭೂತಸ್ಥಲಂ ಪ್ರಾಪ್ಯ ತತ್ರ ನೃಸಿಂಹಂ ಸ್ತುತ್ವಾ ತಸ್ಮಾತ್ಕೈವಲ್ಯಗಿರಿಂಪ್ರಾಪ್ಯ ಕೈವಲ್ಯೇಶಮಖಿಲಕಾರಣಂ ಶುದ್ಧಾದ್ವೈತರೂಪಂ ನತ್ವಾ ತತ್ರಅರ್ಚಕಾದೀನ್ ನತ್ವಾ ,, ಇತಿ

ಹೀಗಿರುವದರಿಂದ ದೇವಸ್ಥಾನಗಳಲ್ಲಿ ಅರ್ಚಕೇತರರು ಪೂಜಾದಿಗಳಂ ನಡೆಸುವದು ಶಾಸ್ತ್ರವಿರುದ್ಧವಾಗಿರುವದು. ಮತ್ತು ಶಂಕರಾಚಾರ್ಯರೇ ಮೊದಲಾದವರ ಅನುಷ್ಠಾನಕ್ಕೂ ವಿರುದ್ಧವಾಗಿಯೇ ಇರುತ್ತೆ.

ಅನಂತರ [ " (೫) ವಾಹನಾರೂಢರಾಗಿ ಪ್ರಾಕಾರಪ್ರದಕ್ಷಿಣೆ ಮಾಡಿದ್ದು ಅಸಂಗತವೆಂಬುವದು ಐದನೇ ಉದ್ದೇಶ್ಯವಾಗಿದೆ. ಆದರೆ ಸನ್ಯಾಸಿಗಳು ಸಾಮಾನ್ಯವಾಗಿ ಎಲ್ಲರೂ ವಾಹನಾರೋಹಣವನ್ನು ಮಾಡಬಾರದು ಆದಾಗ್ಯೂ" ಎಂದುಪಕ್ರಮಿಸಿ " ಅನೇಕ ಮಹಾರಾಜರು ಅನೇಕ ಬಿರುದುಗಳನ್ನು ಚತುರಂತ ವಾಹನಗಳನ್ನೂ ಒಪ್ಪಿಸಿ ಇದರಿಂದ ದೇಶಸಂಚಾರಮಾಡಿ ಶಿಷ್ಯಾನುಗ್ರಹಮಾಡಬೇಕೆಂದು ಪ್ರಾರ್ಥಿಸಿದ್ದರಿಂದಲೂ ಅಷ್ಟೈತಾನ್ಯವ್ರತಘ್ನಾನಿ ಆಪೋಮೂಲಂ ಪ್ಯತಂಪಯಃ॥ ಹವಿರ್ಬ್ರಾಹ್ಮಣಕಾಮಾಯ ಗುರೋರ್ವಚನ ಮೌಷಧಂ ॥ ಎಂಬದಾಗಿ ಶಾಸ್ತ್ರವಿರುವದ್ದರಿಂದ ತಮ್ಮ ಗುರುಗಳ ಅಜ್ಞಾನುಸಾರವಾಗಿ ಬಂದಂಥಾ ಯಾನಾರೋಹಣವನ್ನು ಅಂಗೀಕರಿಸಿರುತ್ತಾರೆ."] ಎಂದು ಬರೆದಿರುತ್ತಾರೆ. ದೇವಸ್ಥಾನಕ್ಕೆ ಸೇರಿದ ಪ್ರಾಕಾರದಲ್ಲಿ ವಾಹನಾರೂಢರಾಗಿ ಸಂಚಾರಮಾಡಕೂಡದೆಂಬುವದೇ " ಯಾನ್ಮೈರ್ವಾ ಪಾದುಕಾಭಿರ್ವಾ" ಇತ್ಯಾದಿ ವಚನಾನುಸಾರಿಯಾದ ನಮ್ಮ ಅಭಿಪ್ರಾಯವೇ ಹೊರ್ತು ಸನ್ಯಾಸಿಗಳು ವಾಹನಾರೋಹಣ ಮಾಡಕೂಡದೆಂಬುವದಲ್ಲ. ಆದ್ದರಿಂದ ವಾಹನಾರೋಹಣಮಾತ್ರಕ್ಕಾಗಿ ಇಷ್ಟು ಇವರು ಬರೆದಿರುವದು ವ್ಯರ್ಥವಾಗಿರುವದು. ರಾಜರುಗಳೇ ಆಗಲಿ ಗುರುಗಳೇ ಆಗಲಿ ದೇವಸ್ಥಾನಕ್ಕೆ ಸೇರಿದ ಪ್ರಾಕಾರದಲ್ಲಿ ವಾಹನದಿಂದ ಸಂಚರಿಸಬೇಕೆಂದು ಹೇಳಿರುವದಿಲ್ಲವಷ್ಟೆ.

ಮುಖ್ಯವಾಗಿ ಇವರು ಶಾಸ್ತ್ರವಿರುದ್ಧವಾದ ಕಾರ್ಯಕ್ಕೂ ಉದಾಹರಿಸಿದ " ಅಷ್ಟೈತಾನ್ಯವ್ರತಘ್ನಾನಿ ಆಪೋಮೂಲಂ ಫಲಂಪಯಃ ॥ ಹವಿರ್ಬ್ರಾಹ್ಮಣಕಾಮ್ಯಾಚ ಗುರೋರ್ವಚನಮೌಷಧಂ । " ಎನ್ನುವ ವಚನವು ಸರ್ವಸಾಧಾ

ರಣವೆಂದುನ್ನು ಇತರರಿಗೂ ಆಚಾರ್ಯರುಗಳಿರುವರೆಂದುನ್ನು ಅವರ ಆಜ್ಞಾನುಸಾರ ನಡಿಯಬೇಕಾದದ್ದು ಅವಶ್ಯಕವೆಂದುನ್ನು ಅವರು ಆಚಾರ್ಯಾಜ್ಞಾನುಸಾರವು ಮತ್ತು ಶಾಸ್ತ್ರಾನುಸಾರವು ನಡಿಯುವದಕ್ಕೆ ತಾವು ಕಥಂಚಿದಪಿ ಭಂಗಪಡಿಸಬಾರದೆಂದುನ್ನು ಯೋಚಿಸಿ ಉದಾರಬುದ್ಧಿಯನ್ನು ಇವರು ಪರಿಗ್ರಹಿಸಿರಬೇಕೇದು ಮಧ್ಯಸ್ಥರು ಇವರಿಗೆ ಸೂಚಿಸಬೇಕು ಮತ್ತು ಏಕಾದಶ್ಯಾದ್ಯುಪವಾಸವ್ರತಗಳಲ್ಲಿ ಜಲಪಾನಾದಿಗಳು ಆ ವ್ರತಭಂಜಕಗಳಾಗಲಾರದೆಂಬುವದಕ್ಕಾಗಿ ಉದಾಹರಿಸಿ ,, ಇದಂಚಾತಿಸಂಕಟವಿಷಯಂ " ಎಂದು ಈ ವಚನಕ್ಕೆ ಸಂಕಟಕಾಲಪರತ್ವವನ್ನು ನಿರ್ಣಯಸಿಂಧುವಿನಲ್ಲಿ ಪ್ರಥನು ಪರಿಚ್ಛೇದದಲ್ಲಿ ಹೇಳಿರುವರು. ಇಂಥಾ ವಚನವನ್ನು ಪ್ರಕೃತ ಸಂದರ್ಭದಲ್ಲಿ ಇವರು ಉದಾಹರಿಸಿರುವದು ನೋಡಿದರೆ ಸುವಾಸಿನಿಯೊಬ್ಬಳು ಶಿರೋಭೂಷಣವನ್ನು ಧರಿಸುವದಕ್ಕೆ ದಿನಶುದ್ಧಿಯನ್ನು ಪ್ರಶ್ನೆಮಾಡಿದ ಕಾಲದಲ್ಲಿ " ಕುರ್ವೀತ ಬುಧಸೋಮಯೋಃ " ಎಂಬುವ ವಚನವನ್ನು ಆಕೆಯುನ್ನು ಕುರಿತು ಪ್ರಮಾಣತ್ವೇನ ಉದಾಹರಿಸಿ ತಲೆಗೆಲ್ಲಾ ಒಂದೇ ಶಾಸ್ತ್ರವೆಂದು ವಾದವನ್ನು ಮಾಡುವ ಮಹಾ ಪಂಡಿತರು ಸ್ಮೃತಿಪದದಲ್ಲಿ ಆರೂಢರಾಗುವರು. ಅನಂತರ [" ಆದರೆ ಶ್ರೀ ರಂಗಸ್ವಾಮಿಯವರ ಹೊರಪ್ರಾಕಾರದಲ್ಲಿ ಯಾವದೇವರೂ ಇರುವದಿಲ್ಲವಾದ್ದರಿಂದ ಅಲ್ಲಿ ವಾಹನಾರೋಹಣಮಾಡಿ ದಗ್ಧ ಮಾಡಿಸಿದ್ದೇನೂ ಆಕ್ಷೇಪಣೀಯವಲ್ಲವು "] ಎಂದು ಬರದಿರುವಪು. ಆದರೆ ಹೊರಪ್ರಾಕಾರದಲ್ಲಿ ಶ್ರೀನಿವಾಸದೇವರ ದೇವಸ್ಥಾನವಿದ್ದರೂ " ಯಾವ ದೇವಸ್ಥಾನವೂ ಇಲ್ಲವು ಎಂದು ದೇವಸ್ಥಾನದ ಮುಖವನ್ನೆ ನೋಡದೆ ಬರದಿರುವದಕ್ಕೆ ನಾವು ಬರಿಯತಕ್ಕದ್ದೇನಿಧೆ. ಆದ್ದರಿಂದಲೇ ಶ್ರೀನಿವಾಸ ದೇವರು ಇರುವ ಶ್ರೀರಂಗನಾಥದೇವಸ್ಥಾನದ ಪ್ರಾಕಾರವು ಜನಗಳು ಸಂಸಾರಮಾಡುತ್ತಲಿರುವ ಸ್ಥಳದಂತೆ ಎಂದಿಗೂ ಆಗಲಾರದು. ಆದಕಾರಣ ಶ್ರೀರಂಗದಲ್ಲಿ ಸಂಸಾರಮಾಡುವ ಪ್ರಾಕಾರದೃಷ್ಟಾಂತವನ್ನು

ಬರದಿರುವದು ಅಸಂಬದ್ಧವಾಗಿರುವದು. ಇವರು ಹೇಳುವಂತೆ ಪದ್ಧತಿಯು ಎಂದಿಗೂ ಇರಲಾರದು ಈವಿಷಯದಲ್ಲಿ ವಿಶೇಷಬರಿಯುವದು ಅಪ್ರಕೃತ. [ "ಇದರಿಂದ ದೇವರಿಗೆ ಸಂಪ್ರೋಕ್ಷಣಾದಿಗಳಾಗಬೇಕೆಂಬ ಶಾಸ್ತ್ರವು ದೊರಿಯುವದಿಲ್ಲವು. " ] ಎಂದು ಬರದಿರುವದಕ್ಕೆ ಪೂರ್ವದಲ್ಲಿಯೇ ಸಮಾಧಾನವನ್ನು ಬರದಿರುವೆವು.

ಮೇಲೆ ನಿರೂಪಿಸಿರುವ ಪ್ರಕಾರ ಅದೀಕ್ಷಿತರು ಮಾಡುವ ಗರ್ಭಗೃಹಪ್ರವೇಶ ಅರ್ಚನೇಸಹ ಪಂಚರಾತ್ರಶಾಸ್ತ್ರ ನಿಷಿದ್ಧವಾಗಿರುವದರಿಂದ ಅದಕ್ಕಾಗಿ ಪಂಚರಾತ್ರಕ್ರಮವಾಗಿ ಸಂಪ್ರೋಕ್ಷಣೆ ಯಾಗಬೇಕೆಂಬ ನಮ್ಮ ಉದ್ದೇಶ್ಯವು ಸಿದ್ಧಿಸುವದಕ್ಕೆ ಯಾವಬಾಧೆಯೂ ಇಲ್ಲವಾದ್ದರಿಂದ [ "೬ನೇ ಉದ್ದೇಶವು ಮೇಲೆಹೇಳಿರುವ ೫ ಉದ್ದೇಶ್ಯಗಳು ಸಿದ್ಧಿಸದೇ ಇರುವದರಿಂದ ಶ್ರೀರಂಗನಾಥಸ್ವಾಮಿಯವರಿಗೆ ಸಂಪ್ರೋಕ್ಷಣೆಮಾಡಿಸುವಹಾಗೆ ಮಾಡಿ ಜಗದ್ಗುರು ಶ್ರೀ ಶೃಂಗೇರಿಸ್ವಾಮಿಗಳವರಿಗೆ ಅಪಮಾನ ಮಾಡಬೇಕೆಂಬುವದಷ್ಟೆ ; ಇದುವರಿಗೂ ಉಪನ್ಯಾಸಮಾಡಿರುವ ಪ್ರಕಾರ ಇವರ ೫ ಉದ್ದೇಶ್ಯಗಳು ಸಿದ್ಧಿಸುವದಕ್ಕೆ ಅವಕಾಶವಿಲ್ಲದೆ ಹೋದ್ದರಿಂದ ಆರನೇ ಉದ್ದೇಶ್ಯವು ಸಿದ್ಧಿಸುವದಕ್ಕೆ ಮಾರ್ಗವಿಲ್ಲದೆ ಹೋಯಿತು " ] ಎಂದು ಬರೆದಿರುವದು ಅಸಂಬದ್ಧವು.

ಪಂಚರಾತ್ರಾಗಮಾನುಸಾರಿಯಾದ ದೇವಾಲಯದಲ್ಲಿ ಪಂಚರಾತ್ರ ಶಾಸ್ತ್ರೋಕ್ತದೀಕ್ಷಾರಹಿತರು ಗರ್ಭಗೃಹಪ್ರವೇಶಾರ್ಚನೆಗಳನ್ನು ಮಾಡಕೂಡದೆಂದು ಅನೇಕ ಪ್ರಮಾಣಗಳಿರುವದ್ದರಿಂದ ಪ್ರಕೃತ ಪಂಚರಾತ್ರದೀಕ್ಷಾರಹಿತರುಗರ್ಭಗೃಹಪ್ರವೇಶ ಮತ್ತು ಅರ್ಚನೆ ಸಹಾ ಮಾಡಿ ಇರುವದಾಗಿ ತಿಳಿಯಬಂದಿರುವದರಿಂದ ಸ್ವೀಯ ಪೂಜಾದಿಗಳಿಗೆ ವೈಗುಣ್ಯವನ್ನು ಶಾಸ್ತ್ರೋಕ್ತರೀತ್ಯಾ ಸಂಪ್ರೋಕ್ಷಣೆ ಮಾಡಿ ಪರಿಹರಿಸಿಕೊಳ್ಳಬೇಕೆಂಬುವ ಮುಖ್ಯಾಭಿಪ್ರಾಯವೇ ಹೊರತು ಒಬ್ಬರಿಗೆ ಅಪಮಾನ ಮಾಡಬೇಕೆಂಬುವ ಅಭಿಪ್ರಾ

ಯವು ನಮಗೆ ಎಂದಿಗೂ ಇಲ್ಲವು ಅಶಾಸ್ತ್ರೀಯವನ್ನು ತಾವು ಮಾಡಿದರೆ ಮಾನವೆಂತಲೂ ತತ್ಪರಿಹಾರಕ್ಕಾಗಿಶಾಸ್ತ್ರೀಯವಾದ ಕೆಲಸವನ್ನು ನಾವು ಮಾಡಿದರೆ ತಮಗೆ ಅಪಮಾನವೆಂದು ತಿಳಿದುಕೊಂಡಿರುವವರಿಗೆ ಸರ್ವ ಮತಕ್ಕಿಂತಲೂ ತಮಗೆ ಪ್ರಾಶಸ್ತ್ಯವನ್ನುಸಂಪಾದಿಸಬೇಕೆಂಬ ದುರಾಶೆಮಾತ್ರವಲ್ಲದೆ ಇತರ ಮತಕ್ಕೆ ಯಥಾಕಥಂಚಿತ್ ಅಪಮಾನ ಮಾಡುವದೂ ಮುಖ್ಯಾಭಿಪ್ರಾಯವೆಂದು ತೋರುತ್ತೆ ಇದು ಹೀಗಿರಲಿ ಅನಂತರ [ “ಜಗದ್ಗುರು ಶ್ರೀಶೃಂಗೇರೀಸ್ವಾಮಿಗಳವರಿಗೆ ಯಾವ ಸ್ಥಳದಲ್ಲೇ ಆಗಲಿ ಶಿವವಿಷ್ಣ್ವಾದಿ ದೇವಾಲಯಗಳಿಗೆ ಹೋಗಿ ಅಲ್ಲಿ ದೇವರ ಪೂಜಾದಿಗಳನ್ನು ಮಾಡಬೇಕಾದ ಕುತೂಹಲವೇ ಆಗಲಿ ಅದರಿಂದ ಅವರಿಗೆ ಆಗಬೇಕಾದ ಇಷ್ಟಾರ್ಥಸಿದ್ಧಿಯೇ ಆಗಲಿ ಏನೂ ಇಲ್ಲವು. ಆದರೆ ಇಂಥಾ ಮಹನೀಯರಾದ ತಪೋನಿಷ್ಠರಾದ ಯತೀಶ್ವರರೂ ಇನ್ನೂ ಇತರ ಮಹನೀಯರೂ ಯಾವ ದೇವರ ಪ್ರತಿಮೆಯನ್ನು ಅರ್ಚನೆ ಮಾಡುತ್ತಾರೋ ಅಂಥಾ ಪ್ರತಿಮೆಯಲ್ಲಿ ವಿಶೇಷವಾಗಿ ದೇವತಾ ಸಾನ್ನಿಧ್ಯ ಉಂಟಾಗುವದು ಎಂದು “ನಿರ್ಣಯಸಿಂಧೌ ತೃತೀಯಪರಿಚ್ಛೇದೆ ಪ್ರತಿಮಾರ್ಚನಪ್ರಕರಣೆ ಹಯಶೀರ್ಷ ಪಾಂಚರಾತ್ರೇ—ಅರ್ಚಕಸ್ಯ ತಪೋಯೋಗಾತ್ ಅರ್ಚನಸ್ಯಾತಿಶಾಯನಾತ್ ॥ ಆಭಿರೂಪ್ಯಾಚ್ಚ ಬಿಂಬಾನಾಂ ದೇವಸ್ಸಾನ್ನಿಧ್ಯಮೃಚ್ಛತಿ” ಎಂಬ ವಚನದಿಂದಲೂ “ಕಾಚಃಕಾಂಚನಸಂಸರ್ಗಾದ್ಧತ್ತೆ ಮಾರಕತೀಂ ದ್ಯುತಿಂ । ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಸ್ಸುಪ್ರತಿಷ್ಠಿತಃ” ಎಂಬ ನೀತಿವಚನದಿಂದಲೂ ತಿಳಿಯಬಹುದಾಗಿರುತ್ತೆ ”] ಎಂದಿರುವದು. ಆದರೆ ತಮಗೆ ಬಾಧಕವೆಂದುತೋರುವ “ಅಸ್ಮಾತ್ತೋ ದೇಶಿಕಶ್ಚೈವಂ” ಇತ್ಯಾದಿ ವಚನದಲ್ಲಿ ದೇಶಿಕಶಬ್ದಕ್ಕೆಸನ್ಯಾಸಿಗಳು ಅರ್ಥವಲ್ಲವೆಂದುನ್ನೂ ದೀಕ್ಷಾಬದ್ಧನಾದ ಅರ್ಚಕನೇ ಅರ್ಥವೆಂದು ಇವರೇ ಬರೆದು ಈ ಹಯಶೀರ್ಷಪಂಚರಾತ್ರಸ್ಥ ವಚನದಲ್ಲಿನ ಅರ್ಚಕಶಬ್ದಕ್ಕೆ ಸನ್ಯಾಸಿಗಳು ಅರ್ಥವೆಂದು ಇವರು ಅಭಿಪ್ರಾಯಪಟ್ಟು ತಮಗೆ ಸಾಧಕವಾಗಿ ಆ ವಚನ

ವನ್ನು ಬರೆದಿರುವದಕ್ಕೆ ಆಶ್ಚರ್ಯವಾಗುವದು. ಆಗಮದೀಕ್ಷಾಯುಕ್ತರಾದವರಿಗೆ ತಪೋಯೋಗವು ಮಹತ್ವವು ಇತರರಿಗಿಂತಲೂ ಅಧಿಕವಾಗಿಯೇ ಇರಬಹು ದಾದ್ದರಿಂದ ತತ್ಪರವಾಗಿಯೇ ಹಯಶೀರ್ಷ ಪಂಚರಾತ್ರವಚನ ನೀತಿವಚನ ಗಳು ಉಪಪನ್ನವಾಗುವದ್ದರಿಂದ ಶಾಸ್ತ್ರನಿಷಿದ್ಧರಾಗಿರುವರು ಪೂಜಿಸಬ ಹುದು, ಪ್ರತಿಷ್ಠಿಸಬಹುದು ಎಂಬುವದಕ್ಕೆ ಅವು ಸಾಧಕವಾಗಲಾರವು. ಹಾಗಿಲ್ಲದಪಕ್ಷದಲ್ಲಿ 'ಆಭಿರೂಪ್ಯಾಚ್ಚ ಬಿಂಬಾನಾಂ' ಎಂದಿರುವದರಿಂದ ದೇವತಾ ಸಾನ್ನಿಧ್ಯಕ್ಕಾಗಿ ಅಲ್ಲಲ್ಲಿರುವ ಪುರಾತನ ಬಿಂಬಗಳಿಗಿಂತಲೂ ಸುಂದರವಾದ ನೂತನಬಿಂಬಗಳನ್ನು ಸಂಪಾದಿಸಿ ಪುರಾತನ ಬಿಂಬಗ ಳನ್ನು ಪರಿತ್ಯಜಿಸಬೇಕಾಗಿ ಬರುವದು. ಮತ್ತು—

ತಂತ್ರಗಳು ವೇದ ಬಾಹ್ಯರಿಗೆ ಮುಖ್ಯಪ್ರಮಾಣವೆಂದು ಉಪಕ್ರ ಮದಲ್ಲಿ ಹೇಳಿದ ಇವರು ಯತಿಗಳು ಪೂಜೆಮಾಡುವದ್ದರಿಂದ ಬಿಮ್ಬದಲ್ಲಿ ವಿಶೇಷವಾದ ದೇವತಾ ಸಾನ್ನಿಧ್ಯವು ಉಂಟಾಗುವದೆಂಬುವ ತಮಗೆ ಬೇಕಾ ದವಿಷಯಕ್ಕೆ ನಿರ್ಣಯಸಿನ್ಧೂದ್ಧಾಹೃತ ಹಯಶೀರ್ಷಪಂಚರಾತ್ರದಲ್ಲಿನ ವಚನವನ್ನೇ ಉದಹರಿಸಿರುವದು ಆಶ್ಚರ್ಯಕರವಾಗಿರುವದು. ಇದನ್ನು ಪ್ರಮಾಣತ್ವೇನ ಉದಾಹರಿಸಿದ ನಿರ್ಣಯ ಸಿನ್ಧುಕಾರರಿಗೂ ಪ್ರಕೃತ ಸಂದರ್ಭದಲ್ಲಿ ಅದನ್ನು ಪ್ರಮಾಣತ್ವೇನ ಪರಿಗ್ರಹಿಸಿದಇವರಿಗೂ ಎಷ್ಟು ಮಟ್ಟಿಗೆ ವೈದಿಕತ್ವವೋ ಅದನ್ನು ಮಧ್ಯಸ್ಥರು ವಿಚಾರಿಸಬೇಕು.

ಆದ್ದರಿಂದಲೇ [,, ೧ ಆದ್ದರಿಂದ ಕೆಲವು ದೇವತಾ ಪ್ರತಿಮೆಗಳನ್ನ ಬ್ರಹ್ಮಾದಿ ಗಳು ಪೂಜೆ ಮಾಡಿಧಾರೆಂದುನ್ನೂ, ಕೆಲವು ದೇವತಾಪ್ರತಿಮೆಗಳನ್ನು ಮಹ ರ್ಷಿಗಳು ಪೂಜಿಸಿಧಾರೆಂಬುನ್ನೂ ಈ ರೀತಿಯಾಗಿ ಪ್ರಸಿದ್ಧವಾಗಿರುವ ವಿಗ್ರಹಗಳಲ್ಲಿ ವಿಶೇಷವಾಗಿ ಇತರರಿಗೂ ಭಕ್ತಿ ಉಂಟಾಗುವದು. ಮತ್ತು ಶ್ರೀಮನ್ಮಧ್ವಾಚಾರ್ಯರಿಂದ ಪ್ರತಿಷ್ಠಿಸಲ್ಪಟ್ಟು ಪೂಜಿಸಲ್ಪಟ್ಟದ್ದೆಂದು ಶ್ರೀ ಉಡುಪಿ ಕೃಷ್ಣದೇವರಲ್ಲಿಯೂ, ಶ್ರೀಮದ್ರಾಮಾನುಜಾಚಾರ್ಯರಿಂದ ತರ

ಲ್ಪಟ್ಟು ಪೂಜಿಸಲ್ಪಟ್ಟದ್ದೆಂದು ಮೇಲುಕೋಟೆ ಶ್ರೀ ಸಂಪತ್ಕುಮಾರಸ್ವಾ ಮಿಯುವರಲ್ಲಿಯೂ, ಶ್ರೀಮಚ್ಛಂಕರಭಗವತ್ಪಾದಾಚಾರ್ಯರವರಿಂದ ಸ್ಥಾಪಿಸ ಲ್ಪಟ್ಟು ಪೂಜಿಸಲ್ಪಟ್ಟದ್ದೆಂದು ಶ್ರೀ ಶೃಂಗೇರಿಯಲ್ಲಿರುವ ಶ್ರೀ ಶಾರದಾ ಚಂದ್ರಮೌಳೀಶ್ವರರೇ ಮೊದಲಾದ ದೇವರುಗಳಲ್ಲಿಯೂ ಪ್ರಪಂಚದಲ್ಲಿ ಮಾಧ್ವರು, ಶ್ರೀವೈಷ್ಣವರು, ಸ್ಮಾರ್ತರು ಈ ಸಕಲ ಜನಗಳಿಗೂ ಭಕ್ತಿ ವಿಶೇಷ ಉಂಟಾಗುವದಲ್ಲದೆ ಅದರಿಂದ ಅವರಿಗೆ ಇಷ್ಟಾರ್ಥಸಿದ್ಧಿಯೂ ಆಗು ವದು. (೨) ಆದ್ದರಿಂದ ಮಹಾನುಭಾವರು ಯಾವ ದೇವರನ್ನ ಪೂಜೆಮಾಡು ತ್ತಾರೋ ಅವರ ಶಕ್ತಿಯಿಂದ ಅಲ್ಲಿ ವಿಶೇಷವಾಗಿ ದೇವತಾಸಾನ್ನಿಧ್ಯ ಉಂಟಾ ಗುವದು ಎಂಬ ಅಭಿಪ್ರಾಯವನ್ನು ಮತ್ತು ಸಾಧಾರಣವಾದ ಇತರ ಮನು ಷ್ಯರು ಪೂಜಿಸಿದ್ದರಿಂದ ಉಂಟಾದ ಲೋಪ ಪರಿಹಾರವಾಗಿ ವಿಶೇಷವಾಗಿ ಕಲಾಸಾನ್ನಿಧ್ಯವು ದೇವತಾಪ್ರತಿಮೆಯಲ್ಲಿ ಉಂಟಾಗುವದೆಂದುನ್ನೂ ತಿಳಿದ ಪೂರ್ವೀಕರಾದ ರಾಜರು ಮತ್ತು ಈಚಿಗೆ ಇದ್ದ ರಾಜರು ಮಹಾಜನಗಳೂ ಸಹ ಶ್ರೀಮಚ್ಛಂಕರಭಗವತ್ಪಾದಾಚಾರ್ಯರ ಸಾಕ್ಷಾತ್ಪರಂಪರೆಯಲ್ಲಿ ಸೇರಿದ ಈ ಜಗದ್ಗುರುಗಳ ಪೀಠಸ್ಥರಾದ ಗುರುಗಳನ್ನ ದೇಶದಲ್ಲಿ ಸಂಚಾರಮಾಡು ವಾಗ್ಯೆ ದೊರಕುವ ಶಿವವಿಷ್ಣ್ವಾದಿ ದೇವಾಲಯಗಳಿಗೆ ತಾವು ದಯಮಾಡಿಸಿ ದೇವರನ್ನ ತಾವೇ ಪೂಜೆಮಾಡಿ ಆ ದೇವರ ಸಮೀಪದಲ್ಲಿ ತಮ್ಮ ಶ್ರೇಯಃ ಪ್ರಾರ್ಥನೆ ಮಾಡಬೇಕೆಂದು ಪ್ರಾರ್ಥಿಸಿ ಇದಕ್ಕೆ ತಡೆ ಉಂಟಾಗದೆ ಇರುವ ಹಾಗೆ ಶ್ರೀ ಜಗದ್ಗುರು ಸ್ವಾಮಿಗಳಿಗೆ ಶಿವವಿಷ್ಣ್ವಾದಿ ದೇವಾಲಯಗಳಲ್ಲಿ ಪೂಜೆ ಮಾಡುವದಕ್ಕೆ ಬಿಟ್ಟುಕೊಡಬೇಕೆಂದು ಅನೇಕ ರಾಜರು (೩) ಅನೇಕ ನಿರೂಪಗಳನ್ನು ಸಹ ಬರೆದುಕೊಟ್ಟಿರುತ್ತಾರೆ (೪) ಅದರಂತೆ ದಕ್ಷಿಣದೇಶದಲ್ಲಿ ಶ್ರೀರಂಗ, ಜಂಬುಕೇಶ್ವರ, ಮಧುರೆ, ಕಾಂಚೀಪಟ್ಟಣ, ತಿರುಪತಿ, ದರ್ಭ ಶಯನ, ಅನಂತಶಯನ, ರಾಮೇಶ್ವರ ಮೊದಲಾದ ಅನೇಕ ದಿವ್ಯ ಕ್ಷೇತ್ರಗ ಳಲ್ಲಿಯೂ ಈ ಜಗದ್ಗುರುಸ್ವಾಮಿಗಳವರು ಮತ್ತು ಇವರ ಗುರುಪರಂಪರೆಯ

ವರು ಸಹ ಸ್ವತಃ ಪ್ರೂಜೆಯಂ ಮಾಡಿರುತ್ತಾರೆ. ಉತ್ತರದೇಶದಲ್ಲೂ ಪಶ್ಚಿಮ ದೇಶದಲ್ಲೂ ಗೋಕರ್ಣ, ಕೊಲ್ಲೂರು, ಪಂಡಾರ್ಪುರ ಮೊದಲಾದ ಸ್ಥಳಗಳ ಲ್ಲಿಯೂ ಜಗದ್ಗುರುಸ್ವಾಮಿಗಳವರು ಸ್ವತಃ ಪೂಜಿಸಿರುವದಲ್ಲದೆ ಇವರ ಸಾಕ್ಷಾದ್ಗುರುಗಳಾದ ಶ್ರೀ ನೃಸಿಂಹಭಾರತೀಸ್ವಾಮಿಗಳವರು ಬದರೀಕ್ಷೇತ್ರ ಮೊದಲಾದ ಸ್ಥಲಗಳಲ್ಲಿ ಸಹ ಸ್ವತಃ ಪೂಜೆಯಂ ಮಾಡಿರುತ್ತಾರೆ. ಇದರ ದಾಖಲೆಗಳು ಶ್ರೀ ಶೃಂಗೇರೀಸ್ವಾಮಿಗಳವರ ಮಠದಲ್ಲಿ ಪ್ರಸಿದ್ಧವಾಗಿರುತ್ತೆ"] ಎಂದು ಶಾಸ್ತ್ರಾಧಾರವಿಲ್ಲದ ಬರವಣಿಗೆಯು ಅನಾದರಣೀಯವು. ೧. ಆದರೆ ಬ್ರಹ್ಮಾದಿಗಳು ಮತ್ತು ಇತರ ಮಹರ್ಷಿಗಳು ಆಯಾ ಶಾಸ್ತ್ರಬದ್ಧರಾಗಿಯೆ ಆಯಾಯ ಸ್ಥಲದಲ್ಲಿ ಪೂಜಿಸಿರುವರೆಂದು ಇರುತ್ತೆಯೇ ಹೊರ್ತು ಬೇರೆ ಇಲ್ಲವು. ೨. ಯಾರೇ ಆಗಲಿ ತಮ್ಮಿಂದ ಇಷ್ಟವಾದ ಮಾರ್ಗನ್ನು ಅನುಸರಿಶಿ ಪ್ರತಿಷ್ಠಿತವಾದ ಇಷ್ಟವಾದ ಬಿಂಬವನ್ನು ಪೂಜಿಸಬಹುದು. ಅವರವರ ಪರಂಪರೆಯಲ್ಲಿ ಬಂದವರೂ ಅಂಥಾ ಬಿಂಬವನ್ನು ಪೂಜಿಸಬಹುದು. ಆದ್ದರಿಂದ ಉಡುಪಿ ಕೃಷ್ಣದೇವರನ್ನು ಶ್ರೀಮನ್ಮಧ್ವಾಚಾರ್ಯರವರೂ ತತ್ಪರಂಪರೆಯುವರೂ ಸಹ ಪೂಜಿಸುವದಕ್ಕೂ ಶೃಂಗೇರಿಯಲ್ಲಿನ ಶ್ರೀ ಶಾರದಾಚಂದ್ರಮೌಳೀಶ್ವರರನ್ನು ಶ್ರೀ ಶಂಕರಾಚಾರ್ಯರವರೂ ತತ್ಪರಂಪರೆಯುವರೂ ಸಹ ಪೂಜಿಸುವದಕ್ಕೂ ಯಾವ ಶಾಸ್ತ್ರಬಾಧೆಯೂ ಇರುವದಿಲ್ಲವು. ಮೇಲು ಕೋಟೆಯಲ್ಲಿ ಶ್ರೀಮದ್ರಾಮಾನುಜಾಚಾರ್ಯರವರು ಅರ್ಚಕರ ದ್ವಾರಾ ಪೂಜೆ ಮಾಡಿಸಿದರೆಂದು ಗ್ರಂಥಗಳಲ್ಲಿರುವದೇ ಹೊರತು ಬೇರೆ ಇಲ್ಲವು. ಆದ್ದರಿಂದ ಈ ದೃಷ್ಟಾಂತಗಳು ಆಲಯದಲ್ಲಿನ ಪೂಜಾವಿಷಯಕ್ಕೆ ಅನುಪಯುಕ್ತಗಳು. ೩ ಶೃಂಗೇರಿಯಲ್ಲಿ ಇತರರು ಪೂಜಿಸದೆ ಇದ್ದರೂ ಕಳಾಭಿವೃದ್ಧಿಗೂ ದೇವತಾಸಾನ್ನಿಧ್ಯಕ್ಕೂ ಕೊರತೆ ಇಲ್ಲವೆಂದು ಇವರು ಅಭಿಪ್ರಾಯ ಪಡುವಂತೆಯೇ ಇತರ ಸ್ಥಲದಲ್ಲಿಯೂ ತತ್ತತ್ಸ್ಥಲಾಧಿಕೃತರಲ್ಲದವರು ಪೂಜೆ ಮಾಡದೆ ಇರುವದ್ದರಿಂದ ಅವುಗಳಿಗೆ ಕೊರತೆ ಇಲ್ಲವೆಂದು ಇತರರೂ ಅಭಿ

ಪ್ರಾಯಪಡುವದಕ್ಕೆ ಹಿಂಜರಿಯಲಾರರು.

೪. ಇವರ ನಿರೂಪಗಳು ಇವರಿಗೆ ಯೆಷ್ಟುಮಟ್ಟಿಗೆ ಸಾಧಕವಾಗಿರುವದೋ ಅದನ್ನು ಕ್ರಮವಾಗಿನೋಡಿದಮೇಲೆ ಉತ್ತರಹೇಳಬೇಕಾಗಿರುವದು. ಆದರೆ ಇವರಿಗೆ ವಿರುದ್ಧವಾಗಿಯು ಅನೇಕ ನಿರೂಪಗಳಿರುವವೆಂದುನ್ನು ಅದುಸಮಯದಲ್ಲಿ ಪ್ರಕಾಶವಾಗುವದೆಂದುನ್ನು ಇವರು ಯೋಚಿಸಬೇಕು. ವಸ್ತುತಃ—ಯಾವನಿರೂಪದಲ್ಲಿಯೂ ದೇವಸ್ಥಾನಗಳಲ್ಲಿ ಶಾಸ್ತ್ರನಿಷಿದ್ಧವಾದಕಾರ್ಯಗಳನ್ನು ಮಾಡಬೇಕೆಂದು ಇರಲಾರದು ಒಂದುವೇಳೆ ಹಾಗೆ ಇದ್ದರೂ ನಿಷಿದ್ಧಕಾರ್ಯಗಳಿಂದುಂಟಾದ ಪ್ರತ್ಯವಾಯ ಪರಿಹಾರಕ್ಕಾಗಿ ಸಂಪ್ರೋಕ್ಷಣೆ ಮಾಡಕೂಡದೆಂದು ಆ ನಿರೂಪಗಳಲ್ಲಿ ಎಂದಿಗೂ ಇರಲಾರದು. ಆದ್ದರಿಂದ ಸಂಪ್ರೋಕ್ಷಣೆ ಕೂಡದೆಂದು ಇವರು ಹೇಳುವದಕ್ಕೆ ಅವು ಸಾಧಕವಾಗಲಾರವು. ಮತ್ತು—ನಿರೂಪವೆಂಬುವದು ಒಬ್ಬ ರಾಜನ ಆಜ್ಞೆ. ಶಾಸ್ತ್ರವೆನ್ನುವದು "ಶ್ರುತಿಸ್ಮೃತೀ ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ । ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಪಿನಸಂಶಯಃ" ಎಂಬಂತೆ ಭಗವದಾಜ್ಞೆಯಾಗಿರುವದರಿಂದ ನಿರೂಪಕ್ಕಿಂತಲೂ ಪ್ರಬಲವಾಗಿರುವದು ಇವರು ಶಾಸ್ತ್ರವನ್ನು ಉಲ್ಲಂಘಿಸುವ ಪಕ್ಷದಲ್ಲಿ ಇವರಲ್ಲಿರುವ ನಿರೂಪವನ್ನು ಇತರರು ಗೌರವಿಸಬೇಕಾದದ್ದು ಅನುಚಿತವು

೫. ಶ್ರೀರಂಗಾದಿ ವಿಷ್ಣುಕ್ಷೇತ್ರಗಳಲ್ಲಿಯೂ ಚಿತಂಬರ ಜಂಬುಕೇಶ್ವರಾದಿಶಿವಕ್ಷೇತ್ರಗಳಲ್ಲಿಯುಸಹಾ ಇವರು ಪೂಜೆಮಾಡಬೇಕೆಂದು ಉದ್ಯೋಗಿಸಿದ ಕಾಲದಲ್ಲಿ ಸ್ಮಾರ್ತರೆ ಅಡ್ಡಿಮಾಡಿರುವರೇಹೊರ್ತು ಆಕ್ಷೇತ್ರಗಳಲ್ಲಿ ಎಂದಿಗೂ ಶೃಂಗೇರೀಸ್ವಾಮಿಗಳು ಗರ್ಭಗೃಹಪ್ರವೇಶಾದಿಗಳನ್ನು ಮಾಡಲಿಲ್ಲ. ವಿಶೇಷಜನಗಳು ಇಲ್ಲದ ಒಂದೆರಡು ಚಿಕ್ಕಸ್ಥಳಗಳಲ್ಲಿ ಬಲಾತ್ಕಾರದಿಂದ ಗರ್ಭಗೃಹಪ್ರವೇಶಾದಿಗಳನ್ನು ಮಾಡಿದ್ದರೂ ಅನಂತರ ತತ್ಪ್ರ

ಯಶ್ಚಿತ್ತರೂಪ ಸಂಪ್ರೋಕ್ಷಣೆಯನ್ನೂ ನಡಿಸಿರುತ್ತಾರೆ. ಮತ್ತು ವೈ ಸೂರುದೇಶಗಳಲ್ಲಿನ ಕೆಲವುಸ್ಥಲಗಳಲ್ಲಿಯೂ ಅನೇಕಾವರ್ತಿ ಅನೇಕಸ್ಥಲಗಳಲ್ಲಿ ಇವರ ಉದ್ಯೋಗಕ್ಕೆ ನಿರೋಧಉಂಟಾಗಿರುತ್ತೆ. ಒಂದೆರಡುಕಡೆ ಬಲಾತ್ಕಾರದಿಂದ ಗರ್ಭಗೃಹಪ್ರವೇಶಾದಿಗಳನ್ನು ಮಾಡಿದ್ದಕ್ಕಾಗಿ ಸಂಪ್ರೋಕ್ಷಣೆಯು ನಡದಿರುತ್ತೆ. ಇದಕ್ಕೆಸರಿಯಾದ ದಾಖಲೆಗಳು ಅನೇಕಸ್ಥಲಗಳಲ್ಲಿರುವವು.

ಅನಂತರ "ಮತ್ತು (೧) ಶ್ರೀವೈಷ್ಣವನುಪೂಜನಗಳು ಮಾಡಿರುವ ಪ್ರಸಿಡಿಂಗ್ಸಿನಲ್ಲಿ ಉದಹರಿಸಿರುವ ಅಷ್ಟುವಚನಗಳನ್ನು ನೋಡಿದಾಗ್ಯೂ ಇಂಥಾಸ್ಸಂದರ್ಭದಲ್ಲಿ ದೇವರ ತೀರ್ಥಪ್ರಸಾದವನ್ನ ಶ್ರೀವೈಷ್ಣವರು ತೆಗೆದುಕೊಳ್ಳಬಾರದೆಂದು ಅರ್ಥಕೊಡುವ ವಚನ ಸಿಕ್ಕಲಿಲ್ಲವು. ಲೋಕದಲ್ಲಿ ಯಾವ ಮನುಷ್ಯನಾದರೂ ಒಂದು ತಪ್ಪುಮಾಡಿದರೆ ಅಥವಾ ಅಶುಚಿಯಾಗಿದ್ದರೆ ಅವನುಮುಟ್ಟದ ಅನ್ನೋದಕಾದಿಗಳನ್ನ ತೆಗದುಕೊಳ್ಳಬಾರದೆಂದನ್ನೂ ಅಂಥಾ ಮನುಷ್ಯನ್ನ ನೋಡಬಾರದೆಂದನ್ನೂ ಜನಗಳು ಹೇಳುತ್ತಾರೆ. ಆರೀತಿಯಾಗಿ ಶಾಸ್ತ್ರವೂ ದೊರಿಯುತ್ತೆ, (೨) ಸಕಲವನ್ನೂ ಪಾವನಮಾಡುವನು ದೇವರು ಅಂಥಾವನಿಗೆ ಯಾವರೀತಿಯಿಂಪಲೂ ಅಪರಿಶುದ್ಧತ್ವವನ್ನ ಯಾವ ಶಾಸ್ತ್ರವೂ ಹೇಳಲಾರದು. ಉದಕವು ದೇವರಿಗೆ ಅಭಿಷೇಕಮಾಡಲ್ಪಟ್ಟರೆ ಅದು ತೀರ್ಥರೂಪವಾಗಿ ಎಲ್ಲರನ್ನೂ ಪಾವನ ಮಾಡತಕ್ಕದ್ದಾಗುವದು. (೩) ಅಂಥಾ ಉದಕವು ದೇವರನ್ನ ಶುದ್ಧಿಮಾಡುತ್ತೆಂದು ಯಾವಶಾಸ್ತ್ರದಲ್ಲಿ ಹೇಳಲ್ಪಟ್ಟದ್ದರೂ ಅದು ಆಶ್ಚರ್ಯಕರವಾಗಿರುವದು. ಆದರೆ ದೇವರಿಗೆ ಮಾಡುವ ಸ್ನಪನಾದಿಗಳು ಉಪಚಾರರೂಪವಾದದ್ದೆಂದು ಹೇಳಬಹುದು (೪) ಪ್ರಕೃತದಲ್ಲಿ ಮನುಃ—ಅಗ್ನಿಚಿತ್ ಕಪಿಲಾಸತ್ರೀ ರಾಜಾ ಭಿಕ್ಷುರ್ಮಹೋದಧಿಃ। ದೃಷ್ಟಮಾತ್ರಾಃ ಪುನಂತ್ಯೇತೆ ತಸ್ಮಾತ್ ಪಶ್ಯೇತ ನಿತ್ಯಶಃ॥ ಎಂಬದಾಗಿ ಸನ್ಯಾಸಿ ಸಾಮಾನ್ಯರು ದರ್ಶನಮಾತ್ರ ಪಾವನರಾಗಿರುವಲ್ಲಿ ಅಂಥಾ ಸನ್ಯಾಸಿ

ಗಳಲ್ಲಿ ಪೆರಮಮಹನೀಯರಾದ ಪರಮಹಂಸರಾದ ಜಗದ್ಗುರು ಶ್ರೀ ಶೃಂಗೇರಿ ಸ್ವಾಮಿಗಳವರು ಶ್ರೀರಂಗನಾಧಸ್ವಾಮಿಯವರ ದೇವಾಲಯಕ್ಕೆ ದಯಮಾಡಿದಸಂದರ್ಭದಲ್ಲಿ ಈದೇವರಿಗೆ ಸಂಪ್ರೋಕ್ಷಣೆಯಾದಹೊರ್ತು ವೈಷ್ಣವಸಿದ್ಧಾಂತಕ್ಕೆ ಸಂಬಂಧಪಟ್ಟ ಜನಗಳುಯಾರೂ ದೇವಸ್ಥಾನದಲ್ಲಿ ತೀರ್ಧಪ್ರಸಾದವನ್ನು ಅಂಗೀಕರಿಸತಕ್ಕದ್ದು ಉಚಿತವಲ್ಲವೆಂದು ಶ್ರೀ ಪರಕಾಲಸ್ವಾಮಿಗಳವರು ಅಭಿಪ್ರಾಯಪಟ್ಟಿದ್ಧಾರೆಂದು ಶ್ರೀವೈಷ್ಣವಮಹಾಜನರ ಪ್ರೆಸಿಡೆಂಗ್ಸಿನಕಡೇಭಾಗದಲ್ಲಿ ಶ್ರೀ ಪರಕಾಲಸ್ವಾಮಿಗಳಮಠದ ಶಿರಸ್ತೇದಾರ್ರು ರಂಗಾಚಾರ್ಯರು ಶ್ರೀರಂಗಪಟ್ಟಣದ ವೈಷ್ಣವಮಹಾಜನ ಸಭಾಪ್ರಸಿಡೆಂಟರಾದ ಮ॥ರಾ॥ ಬಿ ಸಿ. ಶ್ರೀನಿವಾಸೈಯಂಗಾರ್ಯರವರಿಗೆ ಬರದಪ್ರತ್ಯುತ್ತರದಿಂದ ತಿಳಿಯಬರುತ್ತೆ. ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯರೆಂದು ಹೊಗಳಿಸಿಕೊಳ್ಳುತ್ತಿರುವ ಶ್ರೀ ಪರಕಾಲಸ್ವಾಮಿಗಳವರು ಈಮೇರಿಗೆ ಅಪ್ಪಣೇಕೊಡಿಸುವದಕ್ಕೆ ಇನ್ನೂ ಏನು ಆಧಾರವಚನಗಳಿರುತ್ತೋ ಅದರನ್ನು ಸರ್ವಜ್ಞರಾದ ಶ್ರೀ ಪರಕಾಲಸ್ವಾಮಿಗಳವರಿಂದ ತಿಳಿದುಕೊಳ್ಳಬೇಕಾಗಿಧೆ. '' ] ಎಂಬುವದಕ್ಕೆ ಮೊದಲಿನ ಪ್ರಸಿಡೆಂಗ್ಸಿನಲ್ಲಿ ಬರದಿರುವ ವಚನಗಳೇ ಸಾಕಾದ ಸಮಾಧಾನವೆಂದು ತಿಳಿಯುವದು. ಮತ್ತು—(೧) ಇಂಥಾ ಸಂದರ್ಭದಲ್ಲಿ ಸಂಪ್ರೋಕ್ಷಣೆ ಇಲದೆ ಪೂಜೆಯನ್ನು ದೇವಸ್ಥಾನದಲ್ಲಿ ನಡಿಸಕೂಡದೆಂದು ಹೇಳುವ ,, ದೋಷೈರುಪಹತಂ ಜ್ಞಾತ್ವಾ ಪ್ರಾಸಾದಪ್ರತಿಮಾದಿಕಂ ॥ ಅಸಂಪ್ರೋಕ್ಷ್ಯಾರ್ಚನಂಕುರ್ವ ... ... ... ...ದೇವತಾಯತನಗ್ರಾಮಂ ನಾಶಯೇನ್ನಾತ್ರ ಸಂಶಯಃ ॥ ತಸ್ಮಾತ್ಸಂಪ್ರೋಕ್ಷಣಂ-ಕಾರ್ಯಂ ಪ್ರಾಸಾದಪ್ರತಿಮಾದಿಷು ॥ " ಇತ್ಯಾದಿ ಪಾರಮೇಶ್ವರ ಕ್ರಿಯಾಕಾಂಡ ವಚನಗಳನ್ನು ಬರೆದಿರುವೆವು. ಈ ವಚನಗಳನ್ನು ಇವರೂ (೧೦) ನೇ ಪೇಜಿನಲ್ಲಿ ಉದಹರಿಸಿರುವರು. ಈರೀತಿಯಾಗಿ ಸಂಪ್ರೋಕ್ಷಣೆ ಇಲ್ಲದೇ ದೇವರಿಗೆ ಪೂಜೆಮೇಕೂಡದೆಂದಿರುವಲ್ಲಿ ತೀರ್ಥಪ್ರಸಾದ ಸ್ವೀಕರಿಸಕೂಡದೆಂಬುವದಕ್ಕೆ ಬೇರೆ ವಚನವನ್ನು ನಾವು ಬರೆಯ

ಬೇಕಾದ ಆವಶ್ಯಕವುಂಟೆ ಮಧ್ಯಸ್ಥರು ಪರ್ಯಾಲೋಚಿಸಬೇಕು (೨) ,,ಸಕಲ ವನ್ನು ಪಾವನ ಮಾಡುವ ದೇವರು '' ಎಂದು ಇವರು ಬರೆದಿರುವ ವಾಕ್ಯದಲ್ಲಿ ದೇವರು ಎನ್ನುವ ಪದಕ್ಕೆ ಪ್ರತಿಮೆ ಎಂದು ಅರ್ಥವೋ? ಅಥವಾ ,,ಅರ್ಚಕಸ್ಯ ತಪೋಯೋಗಾ ದರ್ಚನಸ್ಯಾತಿಶಾಯನಾತ್ ‖ ಆಭಿರೂಪ್ಯಾಚ್ಚ ಬಿಂಬಾನಾಂ ದೇವಸಾನ್ನಿಧ್ಯಮೃಚ್ಛತಿ ‖ '' ಎಂದು ಇವರೇ ಉದಾಹರಿಸಿರುವ ವಚನಾ ನುಸಾರ ಪ್ರತಿಮೆಯಲ್ಲಿ ಮಂತ್ರವಿಶೇಷಾದಿಗಳಿಂದ ಸನ್ನಿಧಾನಗೊಂಡ ಪರಮ ಪುರುಷನು ಅರ್ಥವೋ? ಮೊದಲನೇ ಪಕ್ಷದಲ್ಲಿ ಶಿಲ್ಪಿಮೊದಲಾದವರಿಂದ ರಚಿ ಸಲ್ಪಟ್ಟ ಶಿಲಾಲೋಹಾದಿಮಯವಾದ ಪ್ರತಿಮೆಗೆ ಯಾವ ಶಾಸ್ತ್ರಪ್ರಮಾಣ ದಿಂದ ಸಕಲವನ್ನು ಪಾವನಮಾಡುವ ಶಕ್ತಿಯನ್ನು ಇವರು ಒಡಂಬಡುವರೋ ಅಂಥಾ ಶಾಸ್ತ್ರಪ್ರಮಾಣದಿಂದಲೇ ಅಂಥಾ ಪ್ರತಿಮೆಯಲ್ಲಿ ನಿಷಿದ್ಧಸ್ಪರ್ಶಾದಿಗ ಳಿಂದ ಅಶುದ್ಧಿ ಉಂಟಾಗುವದೆಂಬವನ್ನು ಸಂಪ್ರೋಕ್ಷಣಾದಿಗಳಿಂದ ಅಂಥಾ ಅಶುದ್ಧಿ ಪರಿಹೃತವಾಗುವದೆಂಬುನ್ನು ಇವರು ಒಡಂಬಡಬೇಕಾಗಿಯೇ ಇರು ವದು. ಎರಡನೇ ಪಕ್ಷದಲ್ಲಿ ಅಂಥಾ ಪ್ರತಿಮೆಯಲ್ಲಿ ಸನ್ನಿಧಾನಗೊಂಡ ಪರಮ ಪುರುಷನಾದ ಅಚಿಂತ್ಯಮಹಿಮನಾದ ದೇವರಿಗೆ ನಾವು ಎಂದಿಗೂ ಅಶುದ್ಧಿ ಯನ್ನು ಹೇಳಲಾರೆವು. ಮತ್ತು ಯಾವ ಶಾಸ್ತ್ರವೂ ಹೇಳಲಾರದು ಅಂಥಾ ದೇವರಿಗೆ ಸಂಪ್ರೋಕ್ಷಣೆ ಎಂಬುವದೇ ಅಸಂಭಾವಿತವು. ಪ್ರತಿಮಾಪ್ರಾಸಾ ದಾದಿಗಳಿಗೇನೆ ಪ್ರತಿಷ್ಠಾ ಸಂಪ್ರೋಕ್ಷಣಾದಿಗಳು ಸಂಭಾವಿತವು. ಇದೇ ಅರ್ಥವನ್ನೇ ,,ದ್ರವ್ಯವತ್ಕೃತಶೌಚಾನಾಂ ದೇವತಾರ್ಚಾನಾಂ ಪುನಃಪ್ರತಿ ಷ್ಠಾಪನೇನ ಶುದ್ಧಿಃ ” ಎಂದು ವಿಷ್ಣುಸ್ಮೃತಿವಚನವು ಬೋಧಿಸುವದು. ಅದ್ದರಿಂದ ಇವರು ತಮ್ಮ ಮಾತಿನ ಅರ್ಥವನ್ನೇ ಪರ್ಯಾಲೋಚಿಸದೆ ದುರಾ ಕ್ಷೇಪಗಳಿಗೆ ಪ್ರವರ್ತಿಸಿರುವರು. (೩) ಮತ್ತು—ಉದಕವು ದೇವರನ್ನು ಶುದ್ಧಿಮಾಡುವದೆಂದು ಶಾಸ್ತ್ರದಲ್ಲಿ ಹೇಳಿರುವದು ಆಶ್ಚರ್ಯಕರವಾಗಿರುವದೆಂದು ಹೇಳುವ ಬುದ್ಧಿಕೌಶಲ್ಯವುಳ್ಳವರಿಗೆ ಸರ್ವವ್ಯಾಪಕನಾದ ದೇವರಿಗೆ ಒಂದು

ಚಿಕ್ಕಗುಡಿಯಲ್ಲಿ ಕತ್ತಲೆಯಲ್ಲಿ ಪ್ರತಿಷ್ಠೆಯನ್ನು ನಡಿಸಬೇಕೆಂದು ಹೇಳುವ ಶಾಸ್ತ್ರವಲ್ಲಿ ಅಶ್ಚರ್ಯಉಂಟಾಗದೇ ಇರುವದು ನಮಿಗೆ ಆಶ್ಚರ್ಯಕರವಾಗಿರುವದು. ಆಶಾಸ್ತ್ರವೂ ಇವರಿಗೆ ಆಶ್ಚರ್ಯಕರವಾಗಿದ್ದರೆ ದೇವರ ದರ್ಶನಾದಿಗಳಿಗೆ ದೇವಸ್ಥಾನಕ್ಕೆ ಇವರು ಹೋಗುವದು ಆಶ್ಚರ್ಯಕರವಲ್ಲವೇ ? ನಿಷಿದ್ಧಸ್ಪರ್ಶಗಳಾದರೆ ಪುನಃ ಪ್ರತಿಷ್ಠೆಯನ್ನು ಮಾಡಬೇಕೆಂದು ನಿರ್ಣಯಿಸಿಂಧ್ವಾದಿ ಸ್ಮಾರ್ತಗ್ರಂಥಗಳಲ್ಲಿರುವದನ್ನೇ ಇವರುಯಾತಕ್ಕೆ ನೋಡಲಿಲ್ಲವೋ ? ಮುಖ್ಯವಾಗಿ ಶಾಸ್ತ್ರಮಾರ್ಗವನ್ನು ಉಲ್ಲಂಘಿಸಿ ಇವರುಮಾಡುವ ಆಕ್ಷೇಪಗಳು ವಿಗ್ರಹಾರಾಧನೆಯನ್ನು ದೂಷಿಸುವ ನಾಸ್ತಿಕರು ಮಾಡುವ ಆಕ್ಷೇಪಗಳಂತೆಯೇ ಇರುವವು.

ಮತ್ತು— ನೈಮಿತ್ತಿಕಾನಾಂ ನಿತ್ಯಾನಾಂ ಕರ್ಮಣಾಂ ಭಗವದ್ಗೃಹೆ। ಆರಾಧನಾನಾಂ ವೈಕಲ್ಯಂ ಲೋಪೋವಾ ಪ್ರಾಯಸಂಜ್ಞಿತಂ। ತಸ್ಯಚಿತ್ತಂ ಸಮಾಧಾನ ಮಿತಿನಿರ್ವಚನಕ್ರಿಯಾ। ಇತ್ಯಾದಿ ಪಾದ್ಮಸಂಹಿತಾದಿ ವಚನಗಳನ್ನು ಪರ್ಯಾಲೋಚಿಸಿದವರು ಪೂಜಾವೈಗುಣ್ಯಪರಿಹಾರಕ್ಕಾಗಿಯೇ ಸಂಪ್ರೋಕ್ಷಣಾದಿ ಪ್ರಾಯಶ್ಚಿತ್ತಗಳೆಂದು ಹೇಳುವರು.

(೮) ಮತ್ತು ಸಮುದ್ರವು 'ಅಗ್ನಿಚಿತ್‌ಕಪಿಲಾ' ಇತ್ಯಾದಿವಚನದಲ್ಲಿ ಪರಿಗಣಿತವಾಗಿದ್ದರೂ ಕಾಲವಿಶೇಷದಲ್ಲಿನ ಸಮುದ್ರಸ್ಪರ್ಶನವು "ಅಶ್ವತ್ಥಂ ಸಿಂಧುರಾಜಂಚ ನಿತ್ಯಂಸೇವೇತನಸ್ಪೃಶೇತ್। ಮಂದವಾರೆ ಸ್ಪೃಶೇತ್‌ಪೂರ್ವಮುಪರಂ ಪರ್ವಣಿಸ್ಪೃಶೇತ್।" ಎಂಬಶಾಸ್ತ್ರದಿಂದ ಹ್ಯಾಗೆ ನಿಷಿದ್ಧವಾಗಿರುವದೋ ಹಾಗೆಯೇ ಉದಾಹೃತಾನೇಕ ಪ್ರಮಾಣಾನುಸಾರ ದೇಶವಿಶೇಷದಲ್ಲಿ ಅಂದರೆ ದೇವಾಲಯಸ್ಥಬಿಂಬಾದಿಗಳಲ್ಲಿನ ಸನ್ಯಾಸಿಸ್ಪರ್ಶಾದಿಗಳು ನಿಷಿದ್ಧವಾಗುವದಕ್ಕೆ ಬಾಧಕವಿಲ್ಲವು. ಮತ್ತು—

ಪ್ರತಿಷ್ಠಾದಿಗಳು ಸರ್ವವ್ಯಾಪಕನಾದ ಸರ್ವಶಕ್ತನಾದ ಭಗವಂತನಿಗೆ ಆವಿರ್ಭಾವವಿಶೇಷಕ್ಕಾಗಿಯೇ ಎಂದು ಶಾಸ್ತ್ರಗಳಲ್ಲಿ ಸ್ಪಷ್ಟವಾಗಿರುವದ

ಅಂಥಾಸ್ಥಲಗಳಲ್ಲಿ ಆವಿರ್ಭಾವವಿಶೇಷ ವಿರುವದರಿಂದಲೇ ಅಷ್ಟಾಂಗಪೂಜೆ
ಯಂನಡೆಸಿ ತೀರ್ಥಪ್ರಸಾದಗಳನ್ನು ಸ್ವೀಕರಿಸುವದು. ತೀರ್ಥಪ್ರಸಾದ
ಸ್ವೀಕಾರವು ಪೂಜೆಯ ಎಂಟನೆಯ ಅಂಗಕ್ಕೆ ಸೇರಿರುತ್ತೆಂದು ಶಾಸ್ತ್ರಸಿದ್ಧ
ವಾಗಿರುತ್ತೆ. ನಿಷಿದ್ಧಕಾರ್ಯಪ್ರಸಕ್ತನಾದರೆ ಪೂಜಾವೈಗುಣ್ಯ ಸಂಭ
ವಿಸಿ ಆವಿರ್ಭಾವ ಕಮ್ಮಿಯಾಗುವದೆಂದುನ್ನು ಶಾಸ್ತ್ರದಲ್ಲಿಯೇ ಸ್ಪಷ್ಟವಾಗಿ
ರುವದು. ತಥಾಚ ಸಂಗ್ರಹೆ ಮರೀಚಿಃ—

" ಅಥ ಸಂಪ್ರೋಕ್ಷಣವಿಧಿಂ ವ್ಯಾಖ್ಯಾಸ್ಯಾಮೊ ದೇವದೇವಸ್ಯ
ದ್ವಾದಶ ದಿನಾದೂರ್ಧ್ವ ಮರ್ಚನಾಹೀನೆ ಅನ್ಯದ್ವಿಜಪ್ರಭೃತಿ
ಸಮಸ್ತ ವರ್ಣೈಃ ಅಸ್ಪೃಶ್ಯಚಂಡಾಲೋದಕ್ಯಾದಿಭಿ ಶ್ಚಾಲಯೆ
ಪ್ರವಿಷ್ಟೆ ವಿಷ್ಣುಮೂರ್ತಿಬಿಂಬಂ ವಿಸೃಜ್ಯ ಯಥಾಸ್ಥಾನಂ
ಗಮಿಷ್ಯತಿ. ಪುನರಾಗಮನಾರ್ಥಂಸಂಪ್ರೋಕ್ಷಣಂಕರ್ತವ್ಯಂ"
ಇತಿ ನಿರ್ಣಯಸಿಂಧೌ-ಬ್ರಾಹ್ಮೆ-ಖಂಡಿತೆಸ್ಫುಟಿತೆದಗ್ಧೆ ಭ್ರಷ್ಟೆ
ಮಾನವಿವರ್ಜಿತೆ | ಯಾಗಹೀನೆ ಪಶುಸ್ಪೃಷ್ಟೆ ಪತಿತೆದು
ಷ್ಟಭೂಮಿಷು | ಅನ್ಯಮಂತ್ರಾರ್ಚಿತೆಚೈವ ಪತಿತಸ್ಪರ್ಶದೂ
ಷಿತೆ | ದಶಸ್ವೇತೇಷುನೋಚಕ್ರುಃಸನ್ನಿಧಾನಂ ದಿವೌಕಸಃ | ಇತಿ.

ಈ ವಿಷಯವಾಗಿರುವ ಶಾನಕೀಯಾಲಯಾರ್ಚಾಪ್ರಕರಣ ವಚನವನ್ನು
ಪೂರ್ವದಲ್ಲಿಯೇ ಬರವಿರುವೆವು. ಇಂಥಾ ಸಂದರ್ಭದಲ್ಲಿ ಸಂಪ್ರೋಕ್ಷಣೆ ಇಲ್ಲದೆ
ಪೂಜೆಯನ್ನೇ ನಡಿಸಕೂಡದೆಂದುನ್ನು ವಿವರಿಸಿರುತ್ತೇವೆ.

ಆದ್ದರಿಂದ ಪೂರ್ವೋಕ್ತಾನೇಕ ಪ್ರಮಾಣಗಳಿಂದ ನಿಷಿದ್ಧವಾದ
ಅದೀಕ್ಷಿತ ಕರ್ತೃಕಗರ್ಭಗೃಹ ಪ್ರವೇಶಾದಿಗಳಿಂದ ಆವಿರ್ಭಾವ ಕಡಮೆಯಾಗಿ
ಪೂಜಾವೈಗುಣ್ಯಸಂಭವಿಸಿರುವ ಸ್ಥಲದಲ್ಲಿ ಸಂಪ್ರೋಕ್ಷಣೆ ನಡಿಯುವವ
ರಿಗೂ ಅಷ್ಟಾಂಗಪೂಜೆಯಲ್ಲಿ ಎಂಟನೆ ಅಂಗವಾದ ತೀರ್ಥಪ್ರಸಾದ ಸ್ವೀಕಾರ
ವನ್ನು ನಡೆಸದೆ ಇರುವದು ಶಾಸ್ತ್ರಸಿದ್ಧವಾಗಿಯೇ ಇರುತ್ತೆ. ಮತ್ತು ಇದಕ್ಕೆ
ವಿರುದ್ಧವಾಗಿ ನಡಿಸುವದು ವಿಶೇಷ ಪ್ರತ್ಯವಾಯಕರವಾಗಿಯೂ ಇರುತ್ತೆಂದು

---

* ಯಾವ ಸ್ಥಲದಲ್ಲಿ ಯಾವ ಮಂತ್ರದಿಂದ ಪೂಜೆಯು ನಡೆಯುತ್ತಲಿರುವದೊ
ತದ್ಭಿನ್ನ ಮಂತ್ರದಿಂದ ಆ ಸ್ಥಲದಲ್ಲಿ ಪೂಜೆ ನಡೆದರೆ ದೇವತಾಸಾನ್ನಿಧ್ಯವು ತಪ್ಪುವ
ದೆಂದು "ಅನ್ಯಮಂತ್ರಾರ್ಚಿತೆ" ಎಂಬುಪದರಿಂದ ಸ್ಪಷ್ಟವಾಗಿರುವದು.

ಶಾಸ್ತ್ರಜ್ಞರು ಪರ್ಯಾಲೋಚಿಸಬೇಕು. ಇಷ್ಟುಸಾಕು. ಬಹಳ ಹೊತ್ತಾಗಿರುವದರಿಂದ ಇನ್ನು ಉಪನ್ಯಾಸಕ್ಕೆ ವಿರಾಮವನ್ನು ಕೊಡುವೆವು

ನಾವು ಉಪಕ್ರಮಪ್ರಭೃತಿ ಉಪನ್ಯಾಸಮಾಡಿರುವ ಕ್ರಮದಿಂದ ಪಂಚರಾತ್ರಶಾಸ್ತ್ರವು ವೈದಿಕೋತ್ತಮರಿಗೆ ಪ್ರಮಾಣತವಾಗಿರುವದರಿಂದಲೂ ಶ್ರೀ ರಂಗನಾಥದೇವರನ್ನು ಗೌತಮರು ಪಂಚರಾತ್ರಕ್ರಮದಿಂದಲೇ ಪೂಜಿಸಿರುವದರಿಂದಲೂ ಪಂಚರಾತ್ರಸ್ಥಲದಲ್ಲಿ ಅದೀಕ್ಷಿತರಾದವರು ಗರ್ಭಗೃಹಪ್ರವೇಶ ಪೂಜೆ ಮೊದಲಾದ್ದನ್ನು ಮಾಡಕೂಡದೆಂದು ಶಾಸ್ತ್ರದಲ್ಲಿರುವದರಿಂದಲೂ ಅಂಥಾ ಶಾಸ್ತ್ರಕ್ಕೆ ವಿರುದ್ಧವಾದ ಅರ್ಥವನ್ನು ಬೋಧಿಸುವ ಯೋಗ್ಯತಾ ತಾತ್ಪರ್ಯಾದಿಸಾಮಗ್ರಿ ಮತ್ತು ಅಂಥಾ ಶಾಸ್ತ್ರವನ್ನು ಬಾಧಿಸುವ ಶಕ್ತಿಯು ಸಹ ಸೂತಸಂಹಿತಾವಚನಕ್ಕೆ ಇಲ್ಲದೆ ಇರುವದರಿಂದಲೂ " ಶ್ರೀ ಶೃಂಗೇರೀ ಸ್ವಾಮಿಗಳು ಶ್ರೀರಂಗನಾಥದೇವಸ್ಥಾನದಲ್ಲಿ ಗರ್ಭಗೃಹಪ್ರವೇಶವನ್ನೂ ಪೂಜೆಯನ್ನೂಸಹ ಮಾಡಿರುತ್ತಾರೆ " ಎಂದು ತಮ್ಮ ಪ್ರಸಿಡಿಂಗ್ಸಿನಲ್ಲಿ ಬರಜಿರುವ ಪ್ರಾಜ್ಞರು ಮೇಲ್ಕಂಡ ದೇವಸ್ಥಾನದಲ್ಲಿ ಸಂಪ್ರೋಕ್ಷಣೆಗೆ ನಿಮಿತ್ತವಿಲ್ಲವೆಂದು ಬರದಿರುವದು ಅಸೂಯಾದಿಮೂಲಕವೆಂದು ವ್ಯಕ್ತವಾಯಿತು.

ಈಅಂಶವನ್ನು ಶಾಸ್ತ್ರವಿಶ್ವಾಸವುಳ್ಳ ಮಹನೀಯರಾದ ಸ್ಮಾರ್ತರೂ, ವೈಷ್ಣವರೂ, ಶ್ರೀವೈಷ್ಣವರೂ, ಇತರರೂಸಹ ಚಿತ್ತದಲ್ಲಿತಂದು ಶಾಸ್ತ್ರೋಲ್ಲಂಘನೆ ಎಂದಿಗೂ ಆಗಲಾರದಂತೆ ಯತ್ನಿಸಬೇಕೆಂದು ವಿಜ್ಞಾಪಿಸುವೆವು ಮತ್ತು ಪ್ರಕೃತವಿಷಯದಲ್ಲಿನ ಶಾಸ್ತ್ರತತ್ವವನ್ನು ಸ್ಫುಟಪಡಿಸುವದರಲ್ಲಿಯೆ ಮುಖ್ಯಾಭಿಪ್ರಾಯವುಳ್ಳ ಈನಮ್ಮ ಉಪನ್ಯಾಸದಲ್ಲಿ ಯಾವವಿಧವಾದ ನ್ಯೂನಾಧಿಕಭಾಗಗಳಿದ್ದರೂ ಅವುಗಳನ್ನು ಉಪೇಕ್ಷಿಸಿ ಗುಣಗಳನ್ನೇ ಗ್ರಹಿಸಬೇಕೆಂದು ಸರ್ವರಿಗೂ ಸಾಂಜಲಿಬಂಧರಾಗಿ ವಿಜ್ಞಾಪಿಸುವೆವು

ಇತಿಶ್ರೀ ಭಗವಚ್ಛಾಸ್ತ್ರಭಾಸ್ಕರವೆಂಬ ಪ್ರಬಂಧದಲ್ಲಿ ಭಗವದಾಲಯಾಂತ
ರ್ಯಾನ ಪಾದುಕಾರೂಢಗಮನಾದಿ ನಿಷೇಧ ಪ್ರಕಾಶಕವಾದ
ದ್ವಿತೀಯ ಮಯೂಖವು ಸಂಪೂರ್ಣವಾದುದು.

॥ ಶ್ರಿಯೈ ನಮಃ ॥

## ಶುದ್ಧ ಪಾಠಗಳು.

| ಪುಟ. | ಪಙ್ತಿ | | ಪುಟ. | ಪಙ್ತಿ. | |
|---|---|---|---|---|---|
| ೭ | ೧೧ | ಸ್ಥಾಪಯೇ. | ೫೪ | ೧೭ | ಣಾಶ್ಯಾಸ್ತ್ರಚೊ. |
| ೧೦ | ೫ | ಅದ್ವೈತ. | ೫೭ | ೧೫ | ಬಾಹ್ಮಣರಿಗೆ. |
| ೧೧ | ೫ | ಗತವಾಗಿಧೆ. | ,, | ೧೭ | ಲದಲ್ಲಿ ಜನ್ಮವು ಪ್ರಾ. |
| ೧೬ | ೧೫ | ಅವಿರುದ್ಧ. | ೫೮ | ೨೧ | ತೃತ್ವ. |
| ೨೫ | ೨೨ | ಸಾಂಖ್ಯಂ. | ೫೯ | ೮ | ಸಿರುವದು. |
| ೩೧ | ೧ | ಪರಾಯ. | ೬೧ | ೧೫ | ಹೋಗಿ ಎಂದು ಶಾಪ ವಂ ಕೊ. |
| ೩೩ | ೧೦ | ರೋತ್ತ್ತತಪಃ. | ೭೨ | ೮ | ನಕ್ಕೆ ವೈದಿ. |
| ೩೪ | ೧೬ | ಉಪದೇಶಿ. | ೭೩ | ೧೮ | ವಚನಕ್ಕೆ. |
| ೩೬ | ೧೨ | ನೈಷ್ಕ . . ಮೋ ಚಕತ್ವಂ ದಾಚ. | ,, | ೨ | ಅದೀ. |
| | | | ೭೫ | ೨೩ | ವಿಷಮಾ. |
| ೩೬ | ೨೨ | ವೈದಿಕೆ. | ೯೬ | ೨೨ | ಸುವ ಅನನ್ಯ. |

## ಈ ಸಭೆಯವರ ಉದ್ದೇಶ್ಯವನ್ನು ಐಕಕಂಠ್ಯದೊಡನೆ ಪರಿಪೋಷಿಸುವ ಸಭೆಗಳು.



(೧) ಶ್ರೀರಂಗಪಟ್ಟಣದಲ್ಲಿ ... ವೈಷ್ಣವಸಭಾ.
ಅಧ್ಯಕ್ಷರು ಶ್ರೀ॥ ವೇ॥ ಉಡುಪಿ ನರಹರಿ ಆಚಾರ್ಯರು.

(೨) ಮೇಲುಕೋಟೆಯಲ್ಲಿ ... ವೈಷ್ಣವಸಭಾ.
ಅಧ್ಯಕ್ಷರು ಶ್ರೀ॥ ಉ॥ ತಿರುನಾಯಿಮೂಳಿ ತಿರುನಾರಣೈಯ್ಯಂಗಾರ್ರು.

(೩) ಕುಂಭಕೋಣದಲ್ಲಿ .. ತ್ರಿಮತಸ್ಥಸಭಾ.
ಅಧ್ಯಕ್ಷರು ಸತ್ತರ್ಕವಾಚಸ್ಪತಿ ಬಾಲಧನ್ವೀ ಶ್ರೀ॥ ಉ॥ ಕುರುಚ್ಚಿ ರಂಗಾಚಾರ್ಯರು.

(೪) ಚಿದಂಬರದಲ್ಲಿ .. ... ವೈಷ್ಣವಸಭಾ
ಅಧ್ಯಕ್ಷರು ಶ್ರೀ॥ ಉ॥ ವಂಗಿಪುರಂ ರಾಮಾನುಜಾಚಾರ್ಯರು.

(೫) ತಿರುವಹೀಂದ್ರಪುರದಲ್ಲಿ ... ವೈಷ್ಣವಸಭಾ.
ಅಧ್ಯಕ್ಷರು ಶ್ರೀ॥ ಉ॥ ಚಕ್ರಂ ರಾಘವಾಚಾರ್ಯರು.

(೬) ಪುದುಚೆರಿಯಲ್ಲಿ ... ಶಾಸ್ತ್ರವಶ್ಯಸಮಾಜ.
ಅಧ್ಯಕ್ಷರು ಶ್ರೀ ಉ॥ ವ॥ ಶೊ॥ ಮೇಲಾಂಬೂರು ರಂಗಾಚಾರ್ಯರು.

(೭) ಪೆನುಗೊಂಡೆಯಲ್ಲಿ ... ವೈಷ್ಣವಸಭೆ.
ಅಧ್ಯಕ್ಷರು ಶ್ರೀ॥ ವೇ॥ ಪಾರದ ಸುಬ್ಬಣ್ಣಾಚಾರ್ಯರು.

ಇದೇರೀತಿಯಲ್ಲಿ ಮೈಸೂರು ದೇಶದಲ್ಲಿಯೂ ಇತರ ದೇಶಗಳಲ್ಲಿಯೂ ಅನೇಕ ಸಭೆಗಳಿರುವವು